# ನಾಗವೇಣಿಯವರ ಗಾಂಧಿ ಬಂದ ಕಾದಂಬರಿ
# ಸಾಂಸ್ಕೃತಿಕ ಒಳನೋಟಗಳು

ಎಂ.ಫಿಲ್. (ಕನ್ನಡ) ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ
ಸಾದರಪಡಿಸಿದ ಪ್ರೌಢ ಪ್ರಬಂಧ


ಸಂಶೋಧಕರು:

**ಶ್ರೀಮತಿ ಪಿ.ಸಿ. ದಮಯಂತಿ**

ಎಂ.ಎ.

ಉಪನ್ಯಾಸಕಿ, ವಿಜಯ ಕಾಲೇಜು

ಮೂಲ್ಕಿ, ದ.ಕ.

ಮಾರ್ಗದರ್ಶಕರು:

**ಡಾ. ಗಣನಾಥ ಎಕ್ಕಾರು**

ಎಂ.ಎ.,ಪಿಎಚ್.ಡಿ.

ಮುಖ್ಯಸ್ಥರು

ಕನ್ನಡ ಸ್ನಾತಕೋತ್ತರ ಅಧ್ಯಯನ ವಿಭಾಗ

ಸರಕಾರಿ ಪ್ರಥಮದರ್ಜೆ ಕಾಲೇಜು

ತೆಂಕನಿಡಿಯೂರು, ಉಡುಪಿ - ೫೭೬ ೧೦೬



ಅಧ್ಯಯನ ಕೇಂದ್ರ

ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ

ಎಂ. ಜಿ. ಎಂ. ಕಾಲೇಜು, ಕುಂಜಿಬೆಟ್ಟು, ಉಡುಪಿ-೫೭೬ ೧೦೨

೨೦೦೮



414

# ನಾಗವೇಣಿಯವರ ಗಾಂಧಿ ಬಂದ ಕಾದಂಬರಿ
# ಸಾಂಸ್ಕೃತಿಕ ಒಳನೋಟಗಳು

ಎಂ.ಫಿಲ್. (ಕನ್ನಡ) ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ
ಸಾದರಪಡಿಸಿದ ಪ್ರೌಢ ಪ್ರಬಂಧ


ಸಂಶೋಧಕರು:

**ಶ್ರೀಮತಿ ಪಿ.ಸಿ. ದಮಯಂತಿ**

ಎಂ.ಎ.

ಉಪನ್ಯಾಸಕಿ, ವಿಜಯ ಕಾಲೇಜು
ಮೂಲ್ಕಿ, ದ.ಕ.

ಮಾರ್ಗದರ್ಶಕರು:

**ಡಾ. ಗಣನಾಥ ಎಕ್ಕಾರು**

ಎಂ.ಎ.,ಪಿಎಚ್.ಡಿ.

ಮುಖ್ಯಸ್ಥರು
ಕನ್ನಡ ಸ್ನಾತಕೋತ್ತರ ಅಧ್ಯಯನ ವಿಭಾಗ
ಸರಕಾರಿ ಪ್ರಥಮದರ್ಜೆ ಕಾಲೇಜು
ತೆಂಕನಿಡಿಯೂರು, ಉಡುಪಿ – 576 106



[illegible] ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ.



ಅಧ್ಯಯನ ಕೇಂದ್ರ
ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ
ಎಂ. ಜಿ. ಎಂ. ಕಾಲೇಜು, ಕುಂಜಿಬೆಟ್ಟು, ಉಡುಪಿ–576 102

೨೦೦೮

# ಪ್ರಮಾಣ ಪತ್ರ

ಸರಕಾರಿ ಪ್ರಥಮ ದರ್ಜೆ ಕಾಲೇಜು, ತೆಂಕನಿಡಿಯೂರು, ಉಡುಪಿ ಇಲ್ಲಿನ ಕನ್ನಡ ಸ್ನಾತಕೋತ್ತರ ವಿಭಾಗದ ಮುಖ್ಯಸ್ಥರಾದ ಡಾ. ಗಣನಾಥ ಎಕ್ಕಾರುರವರ ಮಾರ್ಗದರ್ಶನದಲ್ಲಿ ಶ್ರೀಮತಿ ಎಚ್. ನಾಗವೇಣಿಯವರ **"ಗಾಂಧಿ ಬಂದ ಕಾದಂಬರಿ: ಸಾಂಸ್ಕೃತಿಕ ಒಳನೋಟಗಳು"** ವಿಷಯ ಕುರಿತು ಈ ಪ್ರಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲೆಂದು ಸಿದ್ಧಪಡಿಸಲಾಗಿದೆ. ಸಿದ್ಧಪಡಿಸಿದ ಎಂ.ಫಿಲ್ ಪ್ರೌಢ ಪ್ರಬಂಧವು ಮೂಲ ಸಂಶೋಧನಾ ಕೃತಿಯಾಗಿದೆ. ಈ ಪ್ರಬಂಧವು ಇಡಿಯಾಗಿ, ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಘೋಷಿಸುತ್ತೇನೆ.

ಸ್ಥಳ : ಉಡುಪಿ
ದಿನಾಂಕ: ೩/೧೦/೨೦೦೮

( ಪಿ. ಸಿ ದಮಯಂತಿ)
ಕನ್ನಡ ಅಧ್ಯಾಪಕರು
ವಿಜಯ ಕಾಲೇಜು, ಮುಲ್ಕಿ, ದ.ಕ.

# ಪ್ರಮಾಣ ಪತ್ರ

ಶ್ರೀಮತಿ ಪಿ. ಸಿ. ದಮಯಂತಿ ಅವರು ಬರೆದು ಸಾದರ ಪಡಿಸಿದ ಎಚ್. ನಾಗವೇಣಿಯವರ **"ಗಾಂಧಿ ಬಂದ ಕಾದಂಬರಿ : ಸಾಂಸ್ಕೃತಿಕ ಒಳನೋಟಗಳು"** ವಿಷಯ ಕುರಿತು ಸಿದ್ಧಪಡಿಸಿದ ಎಂ. ಫಿಲ್ ಪ್ರೌಢ ಪ್ರಬಂಧವು ಮೂಲ ಸಂಶೋಧನಾ ಕೃತಿಯಾಗಿದೆ. ಶ್ರೀಮತಿ ಪಿ. ಸಿ. ದಮಯಂತಿ ಅವರು ನನ್ನ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ ಇಲ್ಲಿ ಸಂಶೋಧನೆ ಕೈಗೊಂಡಿದ್ದಾರೆ. ಈ ಪ್ರಬಂಧವು ಇಡಿಯಾಗಿ, ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಹೇಳುತ್ತಾ ಈ ಪ್ರಮಾಣ ಪತ್ರ ನೀಡುತ್ತೇನೆ.

ಸ್ಥಳ: ಉಡುಪಿ
ದಿನಾಂಕ: ೩/೧೦/೨೦೦೮

(ಡಾ. ಗಣನಾಥ ಎಕ್ಕಾರು)
ಮಾರ್ಗದರ್ಶಕರು

# ಮೊದಲ ಮಾತು

ಲೇಖಕಿ ನಾಗವೇಣಿ ಎಚ್.ರವರ ಕಾದಂಬರಿ '**ಗಾಂಧಿ ಬಂದ**' ಕೃತಿಯ ಕುರಿತಂತೆ ಅಧ್ಯಯನ ಮಾಡಿದ್ದೇನೆ. ಗಾಂಧಿಯ ಆಗಮನವನ್ನು ಕೇಂದ್ರವಾಗಿಟ್ಟುಕೊಂಡು ತುಳುನಾಡಿನ ಸಂಸ್ಕೃತಿಯನ್ನು ವಿಶ್ಲೇಷಿಸುವುದು ಮತ್ತು ಇಲ್ಲಿ ನಡೆದ ಸಾಂಸ್ಕೃತಿಕ ಪರಿವರ್ತನೆಯನ್ನು ಗುರುತಿಸುವುದು ಈ ಕಾದಂಬರಿಯ ಹೆಚ್ಚುಗಾರಿಕೆ. ತುಳುನಾಡಿನಲ್ಲಿ ನಡೆದ ಸ್ವಾತಂತ್ರ್ಯ ಸಂಗ್ರಾಮದ ಚಾರಿತ್ರಿಕ ಹಿನ್ನೆಲೆಯನ್ನು ಈ ಕೃತಿ ಸೃಜನಾತ್ಮಕವಾಗಿ ಅನಾವರಣ ಮಾಡಿದೆ. ಕೃತಿಯನ್ನು ಕೇಂದ್ರವಾಗಿಟ್ಟು ಕೊಂಡು ತುಳುನಾಡ ಸಂಸ್ಕೃತಿಯ ಪ್ರಾದೇಶಿಕತೆಯನ್ನು ಅನಾವರಣಗೊಳಿಸುವ ನಿಟ್ಟಿನಲ್ಲಿ ಈ ಕೃತಿಗೆ ಸಂಬಂಧಪಟ್ಟ ಮಾಹಿತಿಗಳನ್ನು ಕಲೆ ಹಾಕಲು ಪ್ರಾರಂಭಿಸಿದೆ. ವಿಷಯಗಳ ಗ್ರಹಿಕೆ ವಿವಿಧ ಮೂಲಗಳಿಂದ ದೊರೆತಾಗ ನನ್ನ ಶೋಧನೆಯ ಆಸಕ್ತಿ ಹೆಚ್ಚಿತು. ಅದು ಈಗ ಈ ಪ್ರಬಂಧವಾಗಿ ರೂಪುಗೊಂಡಿದೆ.

ಎಂ. ಫಿಲ್ ಮಾಡಬೇಕೆಂಬುದು ನನ್ನ ಹಲವು ದಿನಗಳ ಕನಸು. ಉಡುಪಿಯ ಗೋವಿಂದ ಪೈ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾನಿಲಯದಿಂದ ಈ ಅವಕಾಶ ದೊರೆತಿದೆ. ಇದು ನನಗೆ ಆನಂದವನ್ನು ನೀಡಿದೆ. ನನ್ನ ಮಾರ್ಗದರ್ಶಕರಾಗಬೇಕೆಂದು ಡಾ. ಗಣನಾಥ ಎಕ್ಕಾರು ಇವರನ್ನು ವಿನಂತಿಸಿದೆ. ಅವರ ಸಮ್ಮತಿಯಿಂದ ಈ ಕಾರ್ಯ ಮುಗಿಸಲು ಸಾಧ್ಯವಾಯಿತು.

ನನ್ನ ಓದಿನ ದಾಹಕ್ಕೆ ಒಂದು ಸ್ಪಷ್ಟ ರೂಪುರೇಷೆಯನ್ನು ಒದಗಿಸಿ ತಿಳಿಹೇಳಿದ ಮಾರ್ಗದರ್ಶಕ ಗುರುಗಳಾದ ಡಾ. ಗಣನಾಥ ಎಕ್ಕಾರು ಇವರಿಗೆ ನನ್ನ ಹೃದಯಪೂರ್ವಕ ಕೃತಜ್ಞತೆಗಳು. ಕಾದಂಬರಿ ವಿಶ್ಲೇಷಣೆ ಕಾರ್ಯದಲ್ಲಿ ಲೇಖಕಿ ನಾಗವೇಣಿ ಎಚ್. ಅವರನ್ನು ಸಂದರ್ಶಿಸಿದಾಗ ಅವರು ನೀಡಿದ ಮಾಹಿತಿಗಳಿಗಾಗಿ ಕೃತಜ್ಞ ಳಾಗಿದ್ದೇನೆ. ಈ ವಿಷಯಗಳಿಗೆ ಸಂಬಂಧ ಪಟ್ಟಂತೆ ಹಲವಾರು ಮಾಹಿತಿ ನೀಡಿದ ಪ್ರೊ. ಹಯವದನ ಉಪಾಧ್ಯ ಹಾಗೂ ಪ್ರೊ. ಯಶೋಧರಾ.ಕೆ, ಸಂಜೀವ ಬಳ್ಕೂರುರವರಿಗೆ ಕೃತಜ್ಞತೆಗಳು. ಸ್ಥಳೀಯರಾದ ಗಿರಿಜಾಬಾಯಿ ಮೂಲ್ಕಿ ಇವರು ನೀಡಿದ ಸಹಕಾರಕ್ಕೆ ವಂದನೆಗಳು.

ಎಂ. ಫಿಲ್ ಮಾಡಲು ಅವಕಾಶ ನೀಡಿ ನನ್ನನ್ನು ಪ್ರೋತ್ಸಾಹಿಸಿದ ಉಡುಪಿ ಗೋವಿಂದ ಪೈ ಸಂಶೋಧನಾ ಕೇಂದ್ರದ ನಿರ್ದೇಶಕರಾದ ಪ್ರೊ. ಹೆರಂಜೆ ಕೃಷ್ಣಭಟ್ಟರಿಗೆ ಆಭಾರಿಯಾಗಿದ್ದೇನೆ. ಇಲ್ಲಿ ಕಾರ್ಯ ನಿರ್ವಹಿಸುವ ವೆಂಕಟೇಶರವರ ಸಹಾಯವನ್ನು ಸ್ಮರಿಸುತ್ತೇನೆ. ನನ್ನ ಅಧ್ಯಯನದ ಸಮಯದಲ್ಲಿ ಪ್ರೋತ್ಸಾಹ ನೀಡಿ ಸಹಕರಿಸಿದ ಪ್ರೊ. ಅರವಿಂದ ಜೋಶಿ, ಪ್ರಾಂಶುಪಾಲರು, ವಿಜಯ ಕಾಲೇಜು, ಮೂಲ್ಕಿ ಇವರಿಗೆ ನನ್ನ ಕೃತಜ್ಞತೆಗಳು.

ನನ್ನ ಪ್ರಬಂಧವನ್ನು ಸಕಾಲಕ್ಕೆ ಸೊಗಸಾಗಿ ಬೆರಳಚ್ಚು ಮಾಡಿದ ಉಡುಪಿ ಸುರಭಿ ಡಿ.ಟಿ.ಪಿ ಸೆಂಟರ್‌ನ ಮಾಲಕರಾದ ಶ್ರೀ ಪುರುಷೋತ್ತಮ ಮಕ್ಕಿತ್ತಾಯ ಹಾಗೂ ಬೆರಳಚ್ಚುಗಾರರಿಗೂ ನನ್ನ ವಂದನೆಗಳು.

ಪ್ರಬಂಧದ ರಚನೆಯ ಅವಧಿಯಲ್ಲಿ ಸದಾ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕಾರ ನೀಡಿದ ಬಾಳಗೆಳೆಯ ಎನ್. ಎಸ್. ಮಹಾಬಲ ಪೆರಾಜೆಯವರಿಗೆ ಮನಪೂರ್ವಕ ಕೃತಜ್ಞತೆಗಳು. ಸಹಕರಿಸಿದ ಎಲ್ಲರಿಗೂ ವಂದನೆಗಳು.

ಸ್ಥಳ : ಉಡುಪಿ
ದಿನಾಂಕ: ೩/೧೦/೨೦೦೮

ಪಿ. ಸಿ. ದಮಯಂತಿ
ಉಪನ್ಯಾಸಕರು
ವಿಜಯ ಕಾಲೇಜು ಮೂಲ್ಕಿ

# ಅನುಕ್ರಮಣಿಕೆ



----

# ಅಧ್ಯಾಯ ಒಂದು

## ಪ್ರಸ್ತಾವನೆ

**ಪೀಠಿಕೆ:**

ಪ್ರಾದೇಶಿಕ ಸಂಸ್ಕೃತಿಯನ್ನು ವಿಶಿಷ್ಟವಾದ ರೀತಿಯಲ್ಲಿ ತಮ್ಮ ಕೃತಿಗಳಲ್ಲಿ ಅನಾವರಣ ಮಾಡಿ ಗಮನ ಸೆಳೆದವರು ಲೇಖಕಿ ನಾಗವೇಣಿ ಎಚ್.ರವರು. **'ಗಾಂಧಿ ಬಂದ'** ಕಾದಂಬರಿಯು ಅವರ ಬರವಣಿಗೆಯ ವೈಶಿಷ್ಟ್ಯಗಳನ್ನು ಪರಿಚಯಿಸುವ ಪ್ರಾತಿನಿಧಿಕ ಕೃತಿಯಾಗಿದೆ. ಒಂದು ಸಂಸ್ಕೃತಿಯನ್ನು ನಿರೂಪಿಸುತ್ತಾ ಸಾಮಾಜಿಕ ಪರಿವರ್ತನೆಯನ್ನು ಸೂಕ್ಷ್ಮವಾಗಿ ಯಾವುದೇ ಪಕ್ಷಪಾತವಿಲ್ಲದೆ ಕಟ್ಟಿ ಕೊಡುವ ಪ್ರಯತ್ನ ಅವರ ಬರವಣಿಗೆಯ ವಿಶಿಷ್ಟತೆಯಾಗಿದೆ .

ದಕ್ಷಿಣ ಕನ್ನಡ, ಉಡುಪಿ, ಕಾಸರಗೋಡು ಜಿಲ್ಲೆಗಳನ್ನೊಳಗೊಂಡ ಪ್ರಾಚೀನ ತುಳುನಾಡೆಂದು ಕರೆಯಲ್ಪಡುವ ಪ್ರದೇಶವು ಆಧುನಿಕತೆಯಿಂದ ಪಡೆಯುತ್ತಿರುವ ಹೊಸ ಸ್ವರೂಪದ ಸಾಂಸ್ಕೃತಿಕ ನೆಲೆಗಳ ಸಂಕೀರ್ಣ ರೂಪಗಳನ್ನು ಅವರು ತಮ್ಮ ಕೃತಿಗಳಲ್ಲಿ ನಿರೂಪಿಸಿದ್ದಾರೆ. ಇಲ್ಲಿ ಸಾಮರಸ್ಯದ ಚಿತ್ರಣವಿದೆ. ಪ್ರಕೃತಿ ಮತ್ತು ಸಂಸ್ಕೃತಿಗಳ ಅನಾವರಣವಿದೆ. ಸಾಂಸ್ಕೃತಿಕ ವೈವಿಧ್ಯತೆ – ಏಕತೆಗಳ ಅಭಿವ್ಯಕ್ತಿಯೂ ಇದೆ. ಸಾಮಾಜಿಕ ವ್ಯವಸ್ಥೆಯ ಕ್ರೌರ್ಯ, ಹಿಂಸೆ, ಶೋಷಣೆಗಳ ವಿರುದ್ಧದ ಬಂಡಾಯ ಧ್ವನಿಯಿದೆ. ಈ ಪ್ರದೇಶದ ಅನನ್ಯ ಸಂಸ್ಕೃತಿ ರಕ್ಷಣೆಯ ಕಳಕಳಿಯೊಂದಿಗೆ ಆಧುನಿಕ ಬದುಕಿನಲ್ಲಿ ವ್ಯಕ್ತಿ ಗೌರವಕ್ಕಾಗಿ ಆರ್ಥಿಕ ರಚನೆ – ಸಾಮಾಜಿಕ ಸ್ಥಾನ-ಮಾನಗಳು ಕೂಡ ಮುಖ್ಯವಾಗುವ ಸ್ಥಿತಿಯ ಅಗತ್ಯವನ್ನು ಕಾದಂಬರಿ ಬಿಚ್ಚಿಡುತ್ತದೆ. ತುಳು ಜನಪದ ಬದುಕಿನ ದಟ್ಟ ವಿವರಗಳಿವೆ. ಅವರು ಜನರ ನೋವು ನಲಿವುಗಳಿಂದ ಕೂಡಿದ ಜೀವನ ಕ್ರಮಗಳನ್ನು ಕಾಲದ ಜೊತೆಗೆ ಕಟ್ಟಿಕೊಡುತ್ತಾರೆ. ಕರಾವಳಿಯ ಮಕ್ಕಳಿಗೆ ಇಲ್ಲಿಯ ಪ್ರಕೃತಿ, ಜೀವನ ವಿವರಗಳು ಅಪರಿಚಿತವಾಗಿ ಉಳಿಯವ ಆತಂಕದ ಚಿತ್ರಣಗಳಿವೆ. ಸಂಸ್ಕೃತಿಯ ಸಂಘರ್ಷಗಳನ್ನು ಚಿತ್ರಿಸಿದರೂ ಅಂತಿಮವಾಗಿ ಪ್ರೀತಿ ಮತ್ತು ಮಾನವೀಯ ಮೌಲ್ಯಗಳ ಸಿದ್ಧಾಂತವಷ್ಟೇ ಮುಖ್ಯವಾಗಿ ಬಿಡುತ್ತವೆ. ನವ್ಯೋತ್ತರ ಚಿಂತನೆಯ ದಾಟಿಯನ್ನು ಬಳಸಿಕೊಂಡು ಕಾದಂಬರಿ ಹೇಳಬೇಕಾದುದನ್ನು ನೇರವಾಗಿ ಹೇಳುತ್ತದೆ.

ಗಾಂಧಿ ಬಂದ ಕಾದಂಬರಿಯಲ್ಲಿ ೧೦೦ ವರ್ಷಗಳ ಹಿಂದೆ ತುಳುನಾಡಿನ ಜೀವನಕ್ರಮ ಹೇಗಿತ್ತು ಎಂಬುದನ್ನು ವಿವರಿಸುವುದರೊಂದಿಗೆ ಲೇಖಕಿಯ ಕಾಲದ ಆಸು-ಪಾಸಿನ ಜೀವನ ಕ್ರಮವನ್ನು ಕಟ್ಟಿಕೊಡುವ ಪ್ರಯತ್ನವಿದೆ. ಈ ಕೃತಿಯ ರಚನೆಯ ಸಂದರ್ಭದಲ್ಲಿ ದಕ್ಷಿಣಕನ್ನಡ ಕೋಮು ಗಲಭೆಯಿಂದ ತತ್ತರವಾಗಿತ್ತು. ಆಪ್ತರಾಗಿದ್ದ ಮುಸ್ಲಿಂ ಮತ್ತು ಹಿಂದೂಗಳ ಮಧ್ಯೆ ಕ್ರಮೇಣ ಅನುಮಾನದ ಗೋಡೆಗಳು ನಿರ್ಮಾಣವಾದವು. ಮತ ಧರ್ಮಗಳನ್ನು ಮೀರಿ, ಈ ನಾಡಿನ ಸಂಸ್ಕೃತಿ ಮತ್ತು ಸೃಜನಶೀಲತೆಯನ್ನು ಉಳಿಸಿಕೊಳ್ಳುವ ಅನಿವಾರ್ಯತೆಯನ್ನು ಈ ಕಾದಂಬರಿ ತಿಳಿಸುತ್ತದೆ. ಒಂದು ಸಾಮಾಜಿಕ ವ್ಯವಸ್ಥೆಯನ್ನು ಪರಿಚಯಿಸುತ್ತಾ, ಕಡಲ ಸೆರಗಿನ ಹಳ್ಳಿ ಕುಳಾಯಿ, ಹೊಸಬೆಟ್ಟುಗಳ ಅನನ್ಯ ಸಾಂಸ್ಕೃತಿಕ ಬದುಕನ್ನು ಲೇಖಕಿ ವಿಮರ್ಶಿಸಿದ್ದಾರೆ. ಗಾಂಧಿ ಆ ಕಾಲಘಟ್ಟದಲ್ಲಿ ಮೂಡಿದ

ವಿಶಿಷ್ಟ ಮೌಲ್ಯ. ಕಾಲ ಘಟ್ಟದ ನೋವು ಸಂಭ್ರಮಗಳನ್ನು ಅನನ್ಯತೆಯನ್ನು ಕೃತಿ ವಿವರಿಸುತ್ತದೆ. ತುಳುನಾಡಿನ ಸಂಸ್ಕೃತಿಯ ಕಂಬಳವು ಒಂದು ಕಲೆಯ, ಭಾಷೆಯ, ಪ್ರಾದೇಶಿಕತೆಯ ವಿವಿಧ ಚಹರೆಗಳನ್ನು ಕಟ್ಟಿಕೊಡುತ್ತದೆ; ಗಾಂಧೀ ಮೌಲ್ಯವೇ ಹೊರತು ವ್ಯಕ್ತಿಯಲ್ಲವೆಂಬುದನ್ನು ಕೃತಿ ಪ್ರತಿಪಾದಿಸುತ್ತದೆ.

**ಈ ಅಧ್ಯಯನದಲ್ಲಿ ಈ ಕೆಳಗಿನ ವಿಚಾರಗಳನ್ನು ಮುಖ್ಯವಾಗಿ ಗಮನಿಸಲಾಗಿದೆ.**

- **ಆಧುನಿಕತೆಯಿಂದ ಸ್ಥಿತ್ಯಂತರಗೊಳ್ಳುತ್ತಿರುವ ತುಳುನಾಡು**
- **ಸಾಮಾಜಿಕ ಸಂಘರ್ಷ ಮತ್ತು ಸಾಮರಸ್ಯದ ನೆಲೆಗಳು**
- **ಗಾಂಧಿಯ ಸಾಂಕೇತಿಕತೆ**
- **ಕೃತಿಯಲ್ಲಿ ವ್ಯಕ್ತವಾಗಿರುವ ಸ್ವಾತಂತ್ರ್ಯ ಹೋರಾಟ ಮತ್ತು ತುಳುನಾಡ ಸಂಸ್ಕೃತಿ**

ನವವಸಾಹತು ಶಾಹಿ ಸಂದರ್ಭದಲ್ಲಿ ಒಂದು ಭೂ ಪ್ರದೇಶದ ಸಾಂಸ್ಕೃತಿಕ ದಟ್ಟ ವಿವರಗಳನ್ನು ಪರಂಪರೆಯ ಕಟ್ಟಿಕೊಡುವ ಸೃಜನಶೀಲ ಪ್ರಯತ್ನ ಇದಾಗಿದೆ. ಸೂಕ್ಷ್ಮವಾಗಿ, ಪಕ್ಷಪಾತವಿಲ್ಲದೇ ಅಭಿವ್ಯಕ್ತಗೊಳಿಸಿರುವುದು ಮಾತ್ರವಲ್ಲ ಗಾಂಧಿ ಮೌಲ್ಯವು ಶೂದ್ರ ಜನಾಂಗದಲ್ಲಿ ದಾಖಲಾದ ರೀತಿ ಸ್ವರೂಪವನ್ನು ವಿವರಿಸಿರುತ್ತಾರೆ. ಶೂದ್ರ ವರ್ಗವು ಮಾತನಾಡುವ ಶಕ್ತಿಯನ್ನು ಪಡೆದುಕೊಂಡು ಜಾಣತನದಿಂದ ಬದುಕನ್ನು ಕಟ್ಟಿಕೊಳುತ್ತವೆ. ಈ ಎಲ್ಲಾ ಕಾರಣಗಳಿಂದ ಅವರ ಕೃತಿಗಳ ವಿಶ್ಲೇಷಣೆಯ ಮೂಲಕ ಅವುಗಳ ಅನನ್ಯತೆಗಳನ್ನು ಅರಿಯುವುದಕ್ಕಾಗಿ 'ಗಾಂಧಿ ಬಂದ' ಕೃತಿಯ ಸಾಂಸ್ಕೃತಿಕ ಅಧ್ಯಯನ ಮಾಡಲಾಗಿದೆ.

**ಲೇಖಕಿಯ ಮುಖ್ಯ ಕೃತಿಗಳು:**

ಪ್ರಸ್ತುತ ನಾಗವೇಣಿ ಎಚ್.ರವರು ಹಂಪಿ ಕನ್ನಡ ವಿಶ್ವವಿದ್ಯಾನಿಲಯದಲ್ಲಿ ಸಿರಿಗನ್ನಡ ಪರಾಮಶನ ಕೇಂದ್ರದ ಮುಖ್ಯಸ್ತೆಯಾಗಿ ಕೆಲಸ ಮಾಡುತ್ತಿದ್ದಾರೆ. ದಕ್ಷಿಣಕನ್ನಡ ಜಿಲ್ಲೆಯ ಕುಳಾಯಿ ಸಮೀಪದ ಹೊಸಬೆಟ್ಟು ಇವರ ಹುಟ್ಟೂರು. ತನ್ನ ತಾಯಿಯಿಂದ ಪರಿಸರ ಮತ್ತು ಸಂಸ್ಕೃತಿಯ ಶಿಕ್ಷಣವನ್ನು ಪಡೆದು ಸವೇದನೆಯನ್ನು ರೂಡಿಸಿಕೊಂಡವರು. ತನಗೆ ಸಂಸ್ಕೃತಿಕ ಆಸಕ್ತಿ ಹುಟ್ಟಲು ಮತ್ತೆ ಅದನ್ನು ಬರವಣಿಗೆಯಲ್ಲಿ ಅಭಿವ್ಯಕ್ತಿಗೊಳಿಸಲು ತನ್ನ ತಾಯಿಯೇ ಮೂಲ ಪ್ರೇರಣೆ ಎಂದು ಲೇಖಕಿಯ ಅಭಿಮತ ಅವರು ಬರೆದ ಕೃತಿಗಳು

೧. ಗಾಂಧಿ ಬಂದ (ಕಾದಂಬರಿ)
೨. ವಸುಂಧರೆಯ ಗ್ಯಾನ (ಪರಿಸರ –ಸಂಸ್ಕೃತಿ ಚಿಂತನೆ)
೩. ಮೀಯುವ ಆಟ (ಕಥಾ ಸಂಕಲನ)
೪. ನಾಕನೆ ನೀರು (ಕಥಾ ಸಂಕಲನ)
೫. ಕಡಲು (ಪುಟ್ಟ ಪರಿಚಯಾತ್ಮಕ ಕೃತಿ)

**ವಸುಂಧರೆಯ ಗ್ಯಾನ** – ಇದೊಂದು ಪರಿಸರದ ಕೃತಿ. ೧೦೦ ವರ್ಷಗಳನ್ನು ಮುಂದಿಟ್ಟುಕೊಂಡು ಬರೆದ ಕೃತಿ ಇದು. ಅಮ್ಮನ ನೆನಪುಗಳು ಬಿಚ್ಚಿಕೊಳ್ಳುವ ರೀತಿ ಇಲ್ಲಿದೆ. ಜೈವಿಕ ವಿಜ್ಞಾನದ ಬಗ್ಗೆ, ಪ್ಯೂರ್ ಎಕಾಲಾಜಿಯ ಮಾಹಿತಿಯೂ ಇಲ್ಲಿದೆ. ತನಗೆ ಓದು, ಪರಿಸರ ಮತ್ತು ಸಂಸ್ಕೃತಿಯ ಬರವಣಿಗೆಯಲ್ಲಿ ಆಸಕ್ತಿ ಕುದುರಲು ಅಮ್ಮ ಕಾರಣರಾಗಿದ್ದಾರೆ. ಆದರೆ ನಮ್ಮ ಮುಂದಿನ ಮಕ್ಕಳಿಗೆ ಇದು ಸಿಗಲಾರದು. ಸಿಗಬೇಕೆಂಬ ಎಚ್ಚರಿಕೆ ಈ ಲೇಖನದಲ್ಲಿದೆ. ಕರಾವಳಿಯ ಪ್ರಕೃತಿ ಮತ್ತು, ಮಕ್ಕಳನ್ನು ಕೇಂದ್ರವಾಗಿಟ್ಟುಕೊಂಡು, ತನ್ನ ಉಸಿರಾಗಿರುವ, ಸದಾ ನೆನಪಿನಲ್ಲಿ ಉಳಿದಿರುವ, ಈ ಪರಿವರ್ತನೆಯ ಹಾದಿಯಲ್ಲಿರುವ ತನ್ನೂರ ಸ್ಥಳಗಳ ನೆನಪನ್ನು ದಾಖಲಿಸುವ ಉದ್ದೇಶದಲ್ಲಿ ಈ ಕೃತಿಯ ರಚನೆಯಾಗಿದೆ. ನಾಗವೇಣಿಯವರ ಕತೆಯಲ್ಲಿ ಯಾವಾಗಲೂ ಮುಖ್ಯವಾಗುವ ಕಡಲಿನ ಚಿತ್ರಣವಿದೆ. ನೆಲದ ಮಕ್ಕಳಿಗೆ ಮಣ್ಣಿನ ಎಲ್ಲವನ್ನು ನೀಡುವ ತೌರೂರೆಂದು ಕಡಲನ್ನು ವರ್ಣಿಸಿದ್ದಾರೆ. ಭೂಮಿಯು ಆಧುನಿಕತೆಯ ಅಬ್ಬರಕ್ಕೆ ಸಿಕ್ಕಿದೆ ಎಂಬ ಅವ್ಯಕ್ತ ನೋವಿದೆ. ಶ್ರಮ ಸಂಸ್ಕೃತಿಯನ್ನು ಪ್ರಕೃತಿ ಪರಿಸರದೊಟ್ಟಿಗೆ ಕಟ್ಟಿಕೊಡುವ ಕಾಳಜಿ ಈ ಲೇಖನಗಳದ್ದು. ಕಪ್ಪೆ ಶಾರದೆಯ ಮೇಳದಲ್ಲಿ ಬಾಲ್ಯದ ನೆನಪು ಡಾಳು ಡಾಳಾಗಿ ಉಳಿದುಕೊಂಡ ನೆನಪಿದೆ. ಅವನ್ನು ಕಳೆದುಕೊಳ್ಳುವ ದುರಂತ ಛಾಯೆ ಇದೆ.

ಮುಗಿದ ನರ್ತೆಯ ಸಹಜ ನರ್ತನ ಲೇಖನದಲ್ಲಿ ಆಹಾರಪದ್ಧತಿ ಆ ಮೂಲಕ ಹೆಣೆದುಕೊಂಡ ವರ್ಗ ವ್ಯವಸ್ಥೆ ವ್ಯಕ್ತವಾಗಿದೆ. ಕಲ್ಕತ್ತದಂತಹ ಮಹಾನಗರಕ್ಕೆ ನರ್ತೆಯ ವ್ಯಾಪಾರವಾದಾಗ ಅಲ್ಲಿ "ಸಾವಿನ ಸೂಕ್ಷ್ಮತೆ ಅವುಗಳಿಗೆ ತಟ್ಟಿದಾಗ ರಕ್ಷಣೆಯ ಹಾದಿಯನ್ನು ಹಿಡಿಯುತ್ತವೆ". ಜೀವ ಜಗತ್ತಿನ ಮನೋವ್ಯಾಪಾರದ ಸೃಷ್ಟಿ ಚಿತ್ರಣ ಸಿಗುತ್ತದೆ. ಒಟ್ಟಿಗೆ ಪ್ರಕೃತಿಯ ಒಳಗಾಗಿರುವ ದುರಂತವನ್ನು ತಿಳಿಸುತ್ತದೆ. ಪಣಂಬೂರು ಬಂದರಿನ ಹೊಗೆಯಿಂದ ನಕ್ಷತ್ರಗಳನ್ನು ಆಕಾಶದಲ್ಲಿ ಕಾಣಲು ಸಾಧ್ಯವಾಗದು. ನೆಲ ಜೀವ ಚೈತನ್ಯವನ್ನು ಕಳೆದುಕೊಳ್ಳುತ್ತದೆ. ಹೀಗೆ ತಲೆಮಾರಿನಿಂದ ತಲೆಮಾರಿಗೆ ಇಡೀ ಭೌಗೋಳಿಕ ಪರಿಸರ ಬದಲಾದ ಸ್ಥಿತಿಯನ್ನು ಹೇಳುವಂತಹದು ಈ ಕೃತಿಯಾಗಿದೆ.

**ಮೀಯುವ ಆಟ** ೨೦೦೫ರಲ್ಲಿ ರಚನೆಯಾದ ಕೃತಿ. ವಸಾಹತ್ತೋತ್ತರ ಜೀವನ ಕ್ರಮಗಳನ್ನು ಅನುಭವಗಳನ್ನು ಹೇಳುವಂತದ್ದು. ನಾಗವೇಣಿಯವರು ಕತೆಯೊಳಗೆ ಚಿತ್ರಿಸುವ ಹೆಣ್ಣುಗಳು ವಿಭಿನ್ನ ಮನೋಧರ್ಮದವರು. ಈ ಎಲ್ಲಾ ಕತೆಗಳು ಸಾಮಾಜಿಕ ವ್ಯವಸ್ಥೆಯನ್ನು ನಿರೂಪಿಸುವ ನಿದರ್ಶನಗಳು. ಧಣಿಗಳ 'ಬೆಳ್ಳಿ ಲೋಟ'ಕತೆಯು ಯಜಮಾನ್ಯ ಲೋಕದ ಪರಂಪರೆಯನ್ನು ಕಟ್ಟಿಕೊಡುವಂತಹದ್ದು. ಕಳ್ಳತನದ ಆರೋಪವನ್ನು ಹೇರುವ ಒಡೆಯನ ನೀತಿ, ಮುರುಕು ಗುಡಿಸಲ ಒಳಗಿರುವ ಪ್ರೀತಿಯನ್ನು ಚಿನ್ನಮ್ಮ ಅನುಭವಿಸುವುದು; ಕಳ್ಳತನದ ಮಾತು ತಣ್ಣನೆ ಪ್ರತಿಭಟನೆಯಲ್ಲಿ ಹೇಗೆ ಅಂತ್ಯವಾಗುತ್ತದೆಯೆಂಬುದನ್ನು ಈ ಕತೆ ವಿಸ್ತಾರವಾಗಿ ತಿಳಿಸುತ್ತದೆ. 'ಸಖಿಗೀತ'–ಕತೆಯೊಳಗೆ ಕತೆಯಾಗುವ ಸ್ಥಿತಿಯನ್ನು ತಿಳಿಸುತ್ತದೆ. ದಾನ ಒಡವೆ– ದಾಂಪತ್ಯ ಬದುಕಿನ ಒಡವೆಗಳಾವುವು? ಕ್ರಿಯೆ– ಪ್ರಕ್ರಿಯೆಗಳ ಅಂತರ್‌ಶೋಧ ಕತೆಯಲ್ಲಿದೆ. ತಾಯ್ತನಕತೆ ಸುಖಾಂತ್ಯವನ್ನು ಬಯಸಿ, ಪಾಲನೆ –ಪೋಷಣೆಯನ್ನು ತಿಳಿಸುತ್ತದೆ. ಸಿರಿತೋರಿದ ದಾರಿ–ತುಳುನಾಡ ಬದುಕಿನ ಮಾತೃ ಪ್ರಧಾನ ವ್ಯವಸ್ಥೆಯ ಅಸ್ತಿತ್ವವನ್ನು ತಿಳಿಸುವಂತಹದು. ಲಿಂಗರಾಜಕಾರಣದ ಪ್ರವೇಶವನ್ನು ಕತೆ ವಿಸ್ತಾರವಾಗಿ ತಿಳಿಸುತ್ತದೆ. ಲೈಂಗಿಕ ಚಿಂತನೆ, ಬದುಕು, ಯಾವುವೂ ದಾಸ್ಯದಿಂದ ಹುಟ್ಟಿಕೊಳ್ಳುವಂತಹದಲ್ಲ.

ಸೇವಂತಿ ಓಲೆ–ಎಲ್ಲಕ್ಕೂ ಆತ್ಮಹತ್ಯೆ ಪರಿಹಾರವಲ್ಲವೆಂಬುದನ್ನು ಹೇಳುವಂತಹದು. ನಾಗವೇಣಿ ಎಚ್‌ರವರ ಕತೆಗಳಲ್ಲಿ ಕಡಲಿನ ಅಬ್ಬರವಿದೆ. ವಸಾಹತುಶಾಹಿ ಅಥವಾ ಆಕ್ರಮಣಶೀಲ ಪ್ರವೃತ್ತಿಯ ಒಂದು ನಾಗರಿಕ ಸಮಾಜ ಹೇಗೆ ಗುರುತಿಸಲ್ಪಡುತ್ತದೆ ಎಂಬ ಅಂಶ ಇಲ್ಲಿದೆ. ಬದುಕು ಸ್ವಂತದು. ಅದನ್ನು ಸರಿಯಾಗಿ ಗುರುತಿಸಬೇಕಾದ ಅಗತ್ಯವಿದೆ ಎಂಬುದನ್ನು ಕತೆ ರೂಪುಗೊಳ್ಳುವ ನೆಲೆಯಲ್ಲಿ ತಿಳಿಸುತ್ತದೆ. ನಾಗವೇಣಿಯವರ ಕತೆಗಳಲ್ಲಿ ಸಂಪನ್ಮೂಲವಿರುವ ದುಡಿಯುವ ಜನವರ್ಗವಿದೆ. ಆರ್ಥಿಕ ಕಷ್ಟಗಳನ್ನು ಅನುಭವಿಸುವವರಿದ್ದಾರೆ. ಕೋಮುಸೌಹಾರ್ದತೆಗಳನ್ನು ಗುರುತಿಸುವ ಸ್ಪಷ್ಟತೆ ಇದೆ. ಲೈಂಗಿಕ ರಾಜಕಾರಣಕ್ಕೆ ಕುಟುಂಬವೇ ಕೇಂದ್ರವಾಗಿದೆ ಎಂಬ ಮಾಹಿತಿ ಇದೆ. ದುಡಿಯುವ ವರ್ಗಗಳ ಪ್ರತಿಭಟನೆಯೂ ಇಲ್ಲಿ ವ್ಯಕ್ತವಾಗಿದೆ.

'ನಾಕನೇ ನೀರು'–ಗ್ರಾಮೀಣ ಸಂವೇದನೆಗಳನ್ನು, ಜಾತಿ ಸಂವೇದನೆಗಳನ್ನು ಹಿಡಿದು ಕೊಡುವಂತಹ ಕಲಾಕೃತಿಯಾಗಿದೆ. 'ಕಡಲು' ಕಡಲನ್ನು ವಿಶಿಷ್ಟವಾಗಿ ಪರಿಚಯಿಸುವ ಪುಟ್ಟ ಕೃತಿ.

## 'ಗಾಂಧಿ ಬಂದ' ಕಾದಂಬರಿ ಪರಿಚಯ

ಗಾಂಧಿ ಬಂದ ಕಾದಂಬರಿ ಪ್ರಾದೇಶಿಕ ಸಂಸ್ಕೃತಿಯನ್ನು ದಾಖಲಿಕೊಂಡ ಸೃಜನಶೀಲ ಕೃತಿ. ಒಟ್ಟು ೧೭ ಅಧ್ಯಾಯಗಳನ್ನು ಹೊಂದಿದೆ. ಚಂದ್ರಕೆರೆ ಕಂಬಳ ಮೊದಲ ಅಧ್ಯಾಯವಾದರೆ ಗಾಂಧಿಯ ಕೊಡುಗೆ ಕೊನೆಯ ಅಧ್ಯಾಯವಾಗಿದೆ. ಕಾಳ್ಗಿಚ್ಚುಗಳ ಕಾಳಗ, ಕೋಳಿಕಟ್ಟದ ಒಟ್ಟೆ ಬಂಟೆ, ಸುಂದರಿ ದಾರುವಿನ ದಾರುಣ ವೃತ್ತಾಂತ, ಸುರಗಿ ಮಠದಲ್ಲಿ ಕಂಗೀಲ ಕುಣಿತ, ಭೂತದ ಕಣ್ಣು ಬೆಳಕಿನಲ್ಲಿ ದ್ರೌಪದಿ ಅದ್ರಾಮ, ಗಾಂಧಿನಿಧಿಗೆ ಪಿಜಿನ ಮೂಲ್ಯನ ಬೆಳ್ಳಿಮುರು, ಮರಣದ ಡೋಲು, ಮಾದಿಗರ ಕುಣಿತ, ಜಾರಿಗೆ ಬೆಟ್ಟಲ್ಲಿ ಐತುವಿನ ಕೊಳಲ ನುಡಿ, ಮಾರಪ್ಪನ ಮಡದಿಯಾದ ದಾರು, ಖಾದಿ ಮಾರಾಟದ ಚಪ್ಪರದಲ್ಲಿ ಶುಭಗಳಿಗೆಯ ನಿರ್ಧಾರ, ಸುರಗಿ ಮಠದ ಬಾಂಬ್ರಜೋವು ಪರಾರಿ, ಕಾರ್ನಾಡು ಕೊಟ್ಟ ಔತಣ, ಎದೆ ಬಿರಿಸಿದ ಸಾವಿನ ಸುದ್ದಿ, ಗಾಂಧಿ ಮುಖ್ಯವೊ ಗಂಡ ಮುಖ್ಯವೊ – ಇವು ಉಳಿದ ೧೫ ಅಧ್ಯಾಯಗಳು.

ಒಂದು ನಿರ್ದಿಷ್ಟ ಪ್ರದೇಶದ ಜನರ ಬದುಕು ಮತ್ತು ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಪ್ರಾದೇಶಿಕ ಸಾಹಿತ್ಯದ ಪ್ರಾತಿನಿಧಿಕ ಕೃತಿ ಇದಾಗಿದೆ. ನಿರ್ದಿಷ್ಟ ಪ್ರದೇಶದ ಬದುಕು ಮತ್ತು ಸಂಸ್ಕೃತಿಯ ಅನಾವರಣವೇ ಪ್ರಾದೇಶಿಕ ಸಾಹಿತ್ಯದ ಲಕ್ಷಣ. ಇದು ಈ ಕೃತಿಯಲ್ಲಿ ಕಂಡು ಬರುತ್ತದೆ. ಉಡುಪಿ, ದಕ್ಷಿಣ ಕನ್ನಡ ಮತ್ತು ಕಾಸರಗೋಡು ಜಿಲ್ಲೆಗಳನ್ನೊಳಗೊಂಡ ತುಳುನಾಡಿನ ಸ್ವಾತಂತ್ರ್ಯ ಹೋರಾಟದ ಸಂದರ್ಭದ ೧೦೦ ವರ್ಷಗಳ ಬದುಕನ್ನು ಕಾದಂಬರಿ ರಸವತ್ತಾಗಿ ಚಿತ್ರಿಸುತ್ತದೆ. ತುಳುನಾಡ ಸಂಸ್ಕೃತಿಯ ಸಮಗ್ರ ವಿವರಗಳು ಕಾದಂಬರಿಯಲ್ಲಿದೆ. ತುಳುನಾಡಿಗೆ ಮೂರು ಬಾರಿ ಭೇಟಿ ನೀಡಿದ ಗಾಂಧಿಯ ಆಗಮನವನ್ನು ತಂತ್ರವಾಗಿ ಬಳಸಿ ಗಾಂಧಿಸಿದ್ಧಾಂತವು ಹೇಗೆ ತುಳುನಾಡಿನ ಸಾಮಾಜಿಕ ಸಂರಚನೆಯನ್ನು ಬದಲಾಯಿಸಿತು ಎಂಬುದನ್ನು ಕೃತಿಯು ವಿಶ್ಲೇಷಿಸುತ್ತದೆ. ಈ ಕಾದಂಬರಿ ಮೂರು ನೆಲೆಗಳಲ್ಲಿ ಸಾಗುತ್ತದೆ.

೧) ಸ್ವಾತಂತ್ರ್ಯ ಚಳುವಳಿಯಲ್ಲಿ ಈ ಪ್ರದೇಶದ ಜನರು ತೊಡಗಿಸಿಕೊಂಡ ರೀತಿ

೨) ಅದ್ರಾಮ ಮತ್ತು ದ್ರೌಪದಿಯರ ಪ್ರೇಮಕಥೆ – ಅಂತರ್‌ಜಾತಿಯ ವಿವಾಹ

೩) ತುಳುನಾಡಿನ ಸಾಂಸ್ಕೃತಿಕ ವಿವರಗಳು

ಕಾದಂಬರಿಯು ತುಳುನಾಡಿನ ಸಾಂಸ್ಕೃತಿಕ ವಿವರಗಳನ್ನು ಸಮರ್ಥವಾಗಿ ಚಿತ್ರಿಸುತ್ತದೆ. ಕಾದಂಬರಿಯ ಮೂಲಕ ಸಾಂಸ್ಕೃತಿಕ ತುಳುನಾಡಿನ ಪರಿಚಯವಾಗುತ್ತದೆ. ತುಳುನಾಡಿನ ಕಂಬಳ, ಕೋಳಿ ಅಂಕದಂಥ ಜನಪದ ಕ್ರೀಡೆಗಳು, ಮಾದಿರ ಕುಣಿತದಂಥ ಕುಣಿತಗಳು, ಅಷ್ಟಮಿ, ಚೌತಿ, ಕೆಡ್ಡಸದಂಥ ಹಬ್ಬಗಳು– ಹೀಗೆ ತುಳುನಾಡಿನ ಮೌಖಿಕ ಸಾಹಿತ್ಯ, ಭೌತಿಕ ಸಂಸ್ಕೃತಿ, ಪ್ರದರ್ಶನ ಕಲೆಗಳು ಮತ್ತು ಆಚರಣೆ ನಂಬಿಕೆಗಳ ಮೂಲಕ ತುಳು ಜಾನಪದವನ್ನ ಕೃತಿ ಅನಾವರಣ ಮಾಡುತ್ತದೆ. ಇಲ್ಲಿನ ಜನ ಜೀವನ ವಿಶ್ಲೇಷಣೆಯೊಂದಿಗೆ ಸಂಸ್ಕೃತಿಯ ಪರಿಚಯ ನೀಡುವುದು ಕೃತಿಯ ಆಶಯಗಳಲ್ಲಿ ಒಂದಾಗಿದೆ.

ಅದ್ರಾಮ–ದ್ರೌಪದಿಯ ಪ್ರೇಮ ಕಥೆ ಕಾದಂಬರಿಯ ಜೀವಾಳ. ತುಳುನಾಡಿನ ಸಾಮಾಜಿಕ ಬದುಕು ಬದಲಾವಣೆಯ ಹಾದಿಯನ್ನು ಗಾಂಧಿಯ ಸಂಕೇತದ ಮೂಲಕ ತುಳಿಯುವುದಕ್ಕೆ ಈ ಘಟನೆ ಮಹತ್ವದ್ದಾಗಿದೆ. ಗಾಂಧಿಯ ಪ್ರಮುಖ ಮೌಲ್ಯವಾದ ಹಿಂದೂ–ಮುಸ್ಲಿಂ ಸಾಮರಸ್ಯ, ಹೆಣ್ಣಿನ ಕುರಿತಾದ ಗೌರವ, ಧರ್ಮಕ್ಕಿಂತ ವ್ಯಕ್ತಿಯ ಗೌರವದ ಬದುಕು ಮುಖ್ಯ–ಇತ್ಯಾದಿ ತತ್ವಗಳು ಈ ಘಟನೆಯ ಮೂಲಕ ವ್ಯಕ್ತವಾಗುತ್ತದೆ. ಸಮಾಜದಲ್ಲಿ ಬ್ರಾಹ್ಮಣರ ಪರವಾಗಿದ್ದ ಆಳುವವರ್ಗ ಬಂಟರು ಅವರಿಂದ ಬಿಡಿಸಿಕೊಂಡು , ಅದ್ರಾಮನನ್ನು ಬೆಂಬಲಿಸುವುದು ತುಳುನಾಡಿನ ಸಾಮಾಜಿಕ ರಚನೆ ಭಿನ್ನ ದಾರಿಯನ್ನು ಹಿಡಿಯಲು ಕಾರಣವಾಗುತ್ತದೆ. 'ಗಾಂಧಿವಾದ' ತುಳುನಾಡನ್ನು ಪ್ರವೇಶಿಸಲು ಇದು ಮುಖ್ಯ ಕಾರಣವಾಗುತ್ತದೆ. ಈ ದೃಷ್ಟಿಯಿಂದ ಅದ್ರಾಮ ದ್ರೌಪದಿಯರ ಮದುವೆ ಕಾದಂಬರಿಯ ಕೇಂದ್ರ ಎನ್ನಬಹುದು.

ಗಾಂಧಿಯ ತತ್ವ ಮತ್ತು ಗಾಂಧಿಯ ಆಗಮನ ಈ ಪ್ರದೇಶದ ಜನರಲ್ಲಿ ಮೂಡಿಸಿದ ಸಂಚಲನ ಮತ್ತು ಪರಿವರ್ತನೆಯನ್ನು ಚಿತ್ರಿಸುವುದು ಕಾದಂಬರಿಯ ಇನ್ನೊಂದು ಮುಖ್ಯ ಆಶಯವಾಗಿದೆ. ಈ ಪ್ರದೇಶದಲ್ಲಿ ನಡೆದ ಸ್ವಾತಂತ್ರ್ಯ ಹೋರಾಟ, ಅದರ ಪರಿಣಾಮ ಇಲ್ಲಿನ ಸಮಾಜ ಮತ್ತು ಸಂಸ್ಕೃತಿಯ ಮೇಲೆ ಹೇಗಾಗಿದೆ ಎಂಬುದನ್ನು ಕೃತಿ ವಿವರಿಸುತ್ತದೆ. ಈ ದೃಷ್ಟಿಯಿಂದ ಕರಾವಳಿಯ ಸ್ವಾತಂತ್ರ್ಯ ಹೋರಾಟದ ಚಾರಿತ್ರಿಕ ದಾಖಲೆಯಾಗಿ ಕಾದಂಬರಿಯನ್ನು ಗುರುತಿಸಬಹುದು. ಸಾಹಿತ್ಯವು ಚರಿತ್ರೆಯ ಆಕರವಾಗಬಲ್ಲುದು ಎಂಬುದಕ್ಕೆ ಈ ಕಾದಂಬರಿ ಉತ್ತಮ ಉದಾಹರಣೆಯಾಗಿದೆ.

## ಅಧ್ಯಯನದ ಉದ್ದೇಶ ಮತ್ತು ಸ್ವರೂಪ

ಗಾಂಧಿ ಬಂದ ಕೃತಿಯನ್ನು ಅಧ್ಯಯನಕ್ಕೆ ಒಳಪಡಿಸಲು ನಿರ್ದಿಷ್ಟ ಉದ್ದೇಶಗಳಿವೆ. ಸ್ವಾತಂತ್ರ್ಯ ಪೂರ್ವದಲ್ಲಿ ತುಳುನಾಡಿಗೆ ಆಧುನಿಕತೆಯ ಪ್ರವೇಶವಾಗಿತ್ತು. ಸ್ವಾತಂತ್ರ್ಯೋತ್ತರದಲ್ಲಿ ಈ ಆಧುನಿಕ

ಪ್ರಜ್ಞೆ ತುಳುನಾಡಿನ ಬದುಕಿನಲ್ಲಿ ಸ್ಥಿತ್ಯಂತರವನ್ನುಂಟು ಮಾಡುತ್ತಿರುವುದು ಕಾದಂಬರಿಯಲ್ಲಿ ವಿಶೇಷವಾಗಿ ಅಭಿವ್ಯಕ್ತಗೊಂಡಿದೆ. ಇಲ್ಲಿನ ಸಾಮಾಜಿಕ ಸ್ವರೂಪವು ಬದಲಾಗ ತೊಡಗಿತು. ಜಾತಿ ವ್ಯವಸ್ಥೆಯು ಹಲವು ರೀತಿಯ ಬದಲಾವಣೆಗಳಿಗೆ ತೆರೆದುಕೊಳ್ಳತೊಡಗಿತು. ಹಿಂದೂ-ಮುಸ್ಲಿಮರ ನಡುವಿನ ಸಂಬಂಧವು ಹೊಸ ಆಯಾಮವನ್ನು ಪಡೆದುಕೊಳ್ಳತೊಡಗಿತು. ಶ್ರೇಣಿಕೃತ ವ್ಯವಸ್ಥೆ ಮತ್ತು ಒಳ ಶ್ರೇಣಿಕೃತ ಸ್ಥಿತಿಗಳು ಸೋತು ಸೊರಗ ತೊಡಗಿದವು. ಈ ಕಾಲಘಟ್ಟದಲ್ಲಿ ಕಾದಂಬರಿಯನ್ನು ಕೇಂದ್ರವಾಗಿಟ್ಟುಕೊಂಡು ಈ ಎಲ್ಲಾ ಸ್ಥಿತ್ಯಂತರಗಳನ್ನು ಗುರುತಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

**'ಗಾಂಧಿ ಬಂದ'** ಶೀರ್ಷಿಕೆಯೊಂದಿಗೆ ಮೇಲ್ವರ್ಗ ಮತ್ತು ಕೆಳವರ್ಗದವರ ಆಲೋಚನೆಯನ್ನು ದಾಖಲಿಸುವ ಕೆಲಸ ಕಾದಂಬರಿಯಲ್ಲಿ ನಡೆದಿದೆ. ಕೆಳವರ್ಗದ ಜನರ ಬದುಕಿನ ಒಳ ಪ್ರವೇಶಿಸಿ ಭಾಷೆಯ ಮೂಲಕ ಬದುಕನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ. ಮೌನವನ್ನು ಮೌಲ್ಯವಾಗಿಸಿದ ಸಾಮಾಜಿಕ ರಚನೆಯನ್ನು ಪ್ರಶ್ನಿಸುವ ಕೆಲಸ ಮಾಡಲಾಗುತ್ತದೆ. ಅಸ್ಮಿತೆಯನ್ನು ಕಳೆದುಕೊಳ್ಳುವ ಸಂದರ್ಭ ಎದುರಾದಾಗ ಉಂಟಾಗುವ ನೋವಿನ ಧ್ವನಿಯೊಂದಿಗೆ ಅದನ್ನು ಅಭಿವ್ಯಕ್ತಗೊಳಿಸಿದ ರೀತಿ ವಿಶಿಷ್ಟವಾದುದು. ಕಡಲನ್ನು ಅಮ್ಮನಿಗೆ ಹೋಲಿಸುತ್ತಾ, ಜೈವಿಕ ವಿಜ್ಞಾನದ ಬಗ್ಗೆ ತಿಳಿಸಲಾಗಿದೆ. ಕೆಳವರ್ಗದವರ ಬದುಕು ಹೀನಸ್ಥಿತಿಗಳಲ್ಲಿ ಇರುವಾಗ ಗಾಂಧಿ ಬಂದ ಎನ್ನುವ ಮೌಲ್ಯದ ಪ್ರವೇಶವಾಗಿದೆ. ಲೌಕಿಕ ಪ್ರತಿಮೆಗಳನ್ನು ಒಡೆಯುವ ಕೆಲಸ ಇಲ್ಲಿದೆ. ಉಸಿರಾಡುವ ಗಾಳಿ, ಹರಿವ ಸಮುದ್ರ, ಮಣ್ಣಿನ ಸಕಲ ಕೊಡುಗೆಗಳು ಭವಿಷ್ಯದ ಮಕ್ಕಳಿಗೆ ಸಿಗಬೇಕೆಂಬ ಹಂಬಲ ಕೃತಿಯಲ್ಲಿ ವ್ಯಕ್ತವಾದ ರೀತಿಯನ್ನು ವಿವರಿಸುವುದು ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಆಧುನಿಕತೆಯಿಂದ ಹಿಡಿದು ಆಹಾರ ಪದ್ಧತಿ, ಜೀವನ ಕ್ರಮಗಳಲ್ಲಿ ಪ್ರಾದೇಶಿಕತೆಯ ಅಂಶಗಳನ್ನು ಜತನದಿಂದ ಕಾಪಾಡಿಕೊಂಡು ಬಂದಿರುವುದು ತುಳುನಾಡಿನ ವೈಶಿಷ್ಟ್ಯವಾಗಿದೆ. ಈ ಅನನ್ಯ ಸಾಂಸ್ಕೃತಿಕ ಅಂಶಗಳು ಮಹತ್ವವನ್ನು ಕಳೆದುಕೊಳ್ಳುತ್ತಿರುವುದರ ಕುರಿತಾಗಿ ಅನಾಥ ಪ್ರಜ್ಞೆ ಕಾದಂಬರಿಯ ರಚನೆಯ ಹಿನ್ನೆಲೆಯಲ್ಲಿ ಪ್ರಭಾವ ಬೀರಿದೆ. ಇಲ್ಲಿನ ಸಂಸ್ಕೃತಿ ಮತ್ತು ಪರಿಸರಗಳು ಕೈಗಾರೀಕರಣದ ಪ್ರಭಾವಕ್ಕೆ ಒಳಗಾಗಿವೆ. ಚಿತ್ರ ಬಿಡಿಸಿ, ಬಣ್ಣ ಹಚ್ಚಿ ಮುಂದಿನ ಪೀಳಿಗೆಗೆ ತಿಳಿಸುವ ಅನಿವಾರ್ಯತೆ ಎದುರಿಗಿದೆ. ಈ ಸ್ಥಿತ್ಯಂತರವು ಕಾದಂಬರಿ ರಚನೆಯ ಮೂಲ ಪ್ರೇರಣೆ. ಈ ಸ್ಥಿತ್ಯಂತರವನ್ನು ವಿವರಿಸುವುದರ ಮೂಲಕ ಕುತೂಹಲಕಾರಿ ಅಂಶಗಳನ್ನು ವ್ಯಕ್ತಗೊಳಿಸಬಹುದು. ಮೇಲ್ಜಾತಿಯ ಎದುರಲ್ಲಿ ಸ್ಪರ್ಧಿಸಿ ಗೆಲ್ಲಬೇಕು ಮತ್ತು ಮೌಢ್ಯಗಳನ್ನು ಮೀರಬೇಕೆಂಬ ತತ್ವವನ್ನು ತಿಳಿಸಲು ಕಾದಂಬರಿಯೊಳಗೆ ದ್ರೌಪದಿ-ಅದ್ರಾಮರ ಪಾತ್ರಗಳು, ದಾರು-ಮಾರಪ್ಪರ ಪಾತ್ರಗಳು ಹುಟ್ಟಿಕೊಂಡಿವೆ. ಜಾತಿ-ಮತಗಳನ್ನು ಮೀರಿ ಮನುಷ್ಯ ಸಂಬಂಧಗಳಲ್ಲಿ ಯೋಚಿಸುವುದು ಕಾದಂಬರಿಯ ಬಹುಮುಖ್ಯ ವಿಚಾರವಾಗಿದೆ. ಈ ಸ್ಥಿತ್ಯಂತರಗಳು ಕೆಲವೊಮ್ಮೆ ಸಂಘರ್ಷ, ಮತ್ತೊಮ್ಮೆ ಸಾಮರಸ್ಯವನ್ನು ಉಂಟು ಮಾಡುತ್ತವೆ. ಕೆಲವು ಸಕಾರಾತ್ಮಕ ಚಿಂತನೆಗಳು ಸ್ಥಿತ್ಯಂತರಗೊಳ್ಳುವುದನ್ನು ಕಾದಂಬರಿಯು ವಿವರಿಸುತ್ತದೆ. ಜಾತಿಮತಗಳನ್ನು ಮೀರಿ ಗಾಂಧಿ ಬರುವುದನ್ನು ಸ್ವಾಗತಿಸುವುದು ಬದಲಾವಣೆಯನ್ನು ಪ್ರತಿನಿಧಿಸುತ್ತದೆ. ಇದು ಅಧ್ಯಯನ ಯೋಗ್ಯ ವಿಚಾರವಾಗಿದೆ.

ಸಾಮಾಜಿಕ ಸಂಘರ್ಷಗಳ ಹಲವು ನೆಲೆಗಳು ಕಾದಂಬರಿಯಲ್ಲಿ ವ್ಯಕ್ತವಾಗಿದೆ. ಸಾಂಸ್ಕೃತಿಕ ಬದುಕಿನ ಹಲವು ವಿಚಾರಗಳಲ್ಲಿ ವ್ಯಕ್ತವಾಗುತ್ತದೆ. ಜಾತಿ-ಧರ್ಮ, ಆಹಾರ ಪದ್ಧತಿ, ಇತ್ಯಾದಿಗಳಲ್ಲಿ ವ್ಯಕ್ತವಾಗುವ ಬದಲಾವಣೆಗಳು ಕಾದಂಬರಿಯ ಮಹತ್ವದ ಅಂಶಗಳು. ಮುಟ್ಟಿಸಿಕೊಳ್ಳಲಾಗದ ಅಸ್ಪೃಶ್ಯರ ಸ್ಥಿತಿ ಒಳಗಿರುವ ತನ್ನತನವೆನ್ನುವುದು ಎಲ್ಲಿದೆ ಎಂದು ಪ್ರಶ್ನೆ ಮಾಡುವಂತಹುದು. ಕಾದಂಬರಿ ಈ ರೀತಿಯ ಹಲವು ಪ್ರಶ್ನೆಗಳನ್ನು ಎತ್ತುತ್ತದೆ. ಸಂಘರ್ಷ ಮತ್ತು ಪ್ರತಿಭಟನೆಯನ್ನು ಹುಟ್ಟುಹಾಕುತ್ತವೆ. ನಿರ್ಮಿತ ಜಾತಿಗಳಿಂದ ದೊರೆತ ಆರ್ಥಿಕ ನೆಲೆಯನ್ನು ಒಡೆಯುವ ಕೆಲಸವನ್ನು ಕೆಲವು ಪಾತ್ರಗಳು ನಿರ್ವಹಿಸುತ್ತವೆ. ರಾಜಕೀಯ ಮೌಲ್ಯಗಳನ್ನು ಬೆಳೆಸಲು ಮಾನವ ಶಕ್ತಿಗಳ ಪ್ರವೇಶವಾಗಿದೆ. (ಕಾರ್ನಾಡರು, ಗಾಂಧಿ ಮೊದಲಾದವರು). ಸಮಾನತೆಯ ಆರ್ಥಿಕ ನೆಲೆಗಳನ್ನು ಸಾಧಿಸಲು ಸಾಧ್ಯವಾಗುವುದು ಸಂಘರ್ಷ ಮತ್ತು ಹೋರಾಟಗಳಿಂದಲೇ ಎಂಬುದನ್ನು ಈ ಕೃತಿಯೊಳಗೆ ವಿವಿಧ ನೆಲೆಯಲ್ಲಿ ಗುರುತಿಸಬಹುದು.

ಧಾರ್ಮಿಕ ನೆಲೆಯಲ್ಲಿ ಯೋಚಿಸಿದರೆ, ಹಲವು ಕ್ರಾಂತಿಕಾರಕವೆನ್ನಬಹುದಾದ ಘಟನೆಗಳು ನಡೆಯುತ್ತವೆ. ಕಾದಂಬರಿಯ ಪಾತ್ರಗಳು ಬ್ರಾಹ್ಮಣ್ಯದ ಆಲೋಚನೆಯನ್ನು ಮೀರುತ್ತವೆ. ಅವರಲ್ಲಿ ಹೊಂದಾಣಿಕೆ ಬಾರದೆ ಹೋದಾಗ ತಮ್ಮ ಛಲ ಸಾಧಿಸಲು ಗುತ್ತಿನೊಡೆಯರು ದ್ರೌಪದಿ-ಅದ್ರಾಮರ ಮದುವೆ ಮಾಡಿಸುವುದರ ಮೂಲಕ ಹೊಸ ಇತಿಹಾಸವನ್ನು ಬರೆಯುತ್ತಾರೆ. ಸಂಘರ್ಷಗಳು ಫಲ ನೀಡುತ್ತವೆ. ಆ ಮೂಲಕ ಮೌಢ್ಯಗಳು ಸೋಲುತ್ತವೆ. ಮಾನವ ಸಿದ್ಧಾಂತಗಳು ಗೆಲುವನ್ನು ಪಡೆಯುತ್ತವೆ ಎಂಬುದನ್ನು ಕಾದಂಬರಿ ನಿರೂಪಿಸುವ ರೀತಿ ಸುಂದರವಾಗಿದೆ.

ಬದುಕುವ ಹಕ್ಕು ಒಬ್ಬರ ಪಾಲಾಗಿ ವಂಚಿತರು ಅವುಗಳನ್ನು ಹೋರಾಟದ ಮೂಲಕ ಪಡೆಯಲು ಪ್ರಯತ್ನಿಸುವುದನ್ನು ಇಲ್ಲಿ ಗುರುತಿಸಬಹುದು. ಹೋರಾಟ ಕ್ರಾಂತಿಯ ಮೂಲಕ ಜೀವನಕ್ರಮದಲ್ಲಿ ಬದಲಾಗುತ್ತಾ ಹೋಗುತ್ತದೆ. ಸಾಮರಸ್ಯದ ನೆಲೆಯು ಸಂಘರ್ಷದಲ್ಲಿ ಅಂತ್ಯವಾದರೆ, ನಂತರದ ದಿನಗಳಲ್ಲಿ ಸಂಘರ್ಷವು ಸಾಮರಸ್ಯದಲ್ಲಿ ಅಂತ್ಯವಾಗುವುದನ್ನು ಕಾದಂಬರಿಯೊಳಗೆ ಸನ್ನಿವೇಶಕ್ಕೆ ತಕ್ಕಂತೆ ಗುರುತಿಸಲಾಗಿದೆ.

ಸಾಂಸ್ಕೃತಿಕ ಆಚರಣೆಗಳಿಂದ ಈ ಕಾದಂಬರಿ ಪ್ರಾರಂಭವಾಗಿ ಸಾಂಸ್ಕೃತಿಕ ಆಚರಣೆಯಲ್ಲಿ ಒಂದಾದ ಕಂಬಳದೊಂದಿಗೆ ಅಂತ್ಯವಾಗುತ್ತದೆ. ತುಳುನಾಡಿನಲ್ಲಿ ಸಾಂಸ್ಕೃತಿಕವಾಗಿ ಹುಟ್ಟಿಕೊಂಡ ಕಂಬಳ, ಭೂತಕೋಲದಲ್ಲಿ ಎಲ್ಲಾ ಜಾತಿಯವರು ಭಾಗವಹಿಸುತ್ತಾರೆ. ಇಲ್ಲಿ ಸಾಂಸ್ಕೃತಿಕ ಹಬ್ಬ, ಆಚರಣೆಗಳು ಸಂಸ್ಕೃತಿಯ ಸಾಮರಸ್ಯವನ್ನು ಅನಾವರಣ ಮಾಡುತ್ತವೆ. ಕಾದಂಬರಿಯೊಳಗೆ ತುಳುನಾಡು, ಇಲ್ಲಿನ ಕಡಲು ಪ್ರತಿಯೊಬ್ಬರದು ಎಂಬ ಸಮತಾಭಾವ ವ್ಯಕ್ತವಾಗಿದೆ. ಇದನ್ನು ವಿವರಿಸುವುದು ಅಧ್ಯಯನದ ಉದ್ದೇಶವಾಗಿದೆ.

ಇಲ್ಲಿ ಗಾಂಧಿಯು ಒಬ್ಬ ವ್ಯಕ್ತಿಯಾಗದೆ ಒಂದು ಸಾಂಕೇತಿಕ ಮೌಲ್ಯವಾಗಿದ್ದಾರೆ. ಚಾರಿತ್ರಿಕ ಪ್ರಜ್ಞೆಯ, ಸಾಮರಸ್ಯದ ಬದುಕಿನ, ನೈಜ ಮೌಲ್ಯಗಳ, ಪ್ರಗತಿಪರ ದೃಷ್ಟಿಕೋನದ ಒಟ್ಟುಮೊತ್ತವಾಗಿ ಗಾಂಧಿ ಕಾಣಿಸಿಕೊಳ್ಳುತ್ತಾರೆ. ಒಂದು ಕಾಲದ ನೈಜ ಸ್ಥಿತಿಯನ್ನು ವಿವರಿಸುತ್ತಾ ಸಂಕ್ರಮಣಾವಸ್ಥೆಯನ್ನು ತಿಳಿಸಲು ಗಾಂಧಿಯ ಪ್ರತಿಮೆ ಬಳಕೆಯಾಗಿದೆ. ಸಮಾಜದ ಅನಿಷ್ಟ ಪದ್ಧತಿಗಳಾದ ಜಾತಿ ವ್ಯವಸ್ಥೆ, ಜೀತಪದ್ಧತಿ, ಇತ್ಯಾದಿಗಳನ್ನು ಬುಡ ಸಮೇತ ಕಿತ್ತೆಸೆಯುವ, ಆ ಮೂಲಕ ಹೊಸ ಶಕ್ತಿಯನ್ನು ಆಹ್ವಾನಿಸುವ ಜೀವನ ಮೌಲ್ಯದ ಸಂಕೇತವಾಗಿ ಗಾಂಧಿ ಕಾಣಿಸಿಕೊಂಡಿದ್ದಾರೆ.

ಅದರೊಂದಿಗೆ ಸತ್ಯ, ಅಹಿಂಸೆ ಮೊದಲಾದ ಮಾನವೀಯ ಮೌಲ್ಯಗಳನ್ನು ಪೋಷಿಸುವ ಸಂಕೇತವಾಗಿ ಗಾಂಧಿ ಕಂಡುಬರುತ್ತಾರೆ. ಎಚ್ಚರಿಕೆಯ ಸ್ಥಿತಿ ಮಾತ್ರ ಮೌಲ್ಯವನ್ನು ಉಳಿಸುತ್ತದೆ ಎಂಬುದನ್ನು ಗಾಂಧಿ ಬರುವಾಗ ನಡೆವ ಸಿದ್ಧತೆ ತಿಳಿಸುತ್ತದೆ. ತುಳುನಾಡಿನ ಸ್ಥಳೀಯ ಸಾಂಸ್ಕೃತಿಕ ವಿವರಗಳ ಜೊತೆ ಗಾಂಧಿ ತತ್ವಗಳ ಸಂವಾದ ಕಾದಂಬರಿಯಲ್ಲಿದೆ. ಒಂದು ಸಾಮಾಜಿಕ ಪರಿವರ್ತನೆಯನ್ನು ಹೇಳುತ್ತಾ, ವರ್ಣ–ವರ್ಗ ಚಿಂತನೆಯಲ್ಲಿ ಬದಲಾವಣೆಯಾಗಬೇಕಾದ ತುರ್ತನ್ನು ಕಾದಂಬರಿಯು ಗಾಂಧಿಯ ಮೂಲಕ ಮುಂದಿಟ್ಟಿದೆ. ವಸಾಹತುಶಾಹಿ ಆಲೋಚನೆಯ ಪ್ರವೇಶವನ್ನು ವಿವಿಧ ಹೋರಾಟಗಳ ಮೂಲಕ ಹಿಮ್ಮೆಟ್ಟಿಸುವ ಪ್ರಯತ್ನದ ದಿಟ್ಟ ಹೆಜ್ಜೆ ಗಾಂಧಿ ಅನುಯಾಯಿಗಳ ಮೂಲಕ ಇಲ್ಲಿ ನಡೆಯುತ್ತದೆ. ಪ್ರೀತಿ, ಪ್ರೇಮ, ಮಾನವ ಸಂಬಂಧಗಳ ಸಂಕೇತವಾಗಿ ಗಾಂಧಿ ಕಂಡುಬರುತ್ತಾರೆ. ಈ ವಿಶ್ಲೇಷಣೆ ಕಾದಂಬರಿಗೆ ವ್ಯಾಖ್ಯಾನ ನೀಡುವ ದೃಷ್ಟಿಯಿಂದ ಮಹತ್ವದ್ದಾಗಿದೆ.

ನಿಸರ್ಗವನ್ನು ಎದುರಿಸುತ್ತಾ ಬದುಕುವುದು, ಹಾಗೂ ಅದರ ಮೇಲೆ ಇರುವ ಗೌರವವೇ ಬೇರೆ – ಅದರ ಮೇಲೆ ಯಜಮಾನಿಕೆ ಸ್ಥಾಪಿಸುವುದೇ ಬೇರೆ – ಆಧುನಿಕತೆ ಪ್ರವೇಶವಾದಾಗ ಯಜಮಾನತ್ವ ಪದ ಪ್ರವೇಶ ಪಡೆಯಿತು. ಸ್ವಾತಂತ್ರ್ಯ ಚಳುವಳಿಯ – ಪ್ರಭಾವ ಇಲ್ಲಿನ ಬದುಕಿನ ಮೇಲಾದ ಪರಿಣಾಮವನ್ನು ಗುರುತಿಸಬಹುದಾಗಿದೆ. ಸ್ವಾತಂತ್ರ್ಯವೆಂದರೆ ಸರಳವಾಗಿ ಬಿಡುಗಡೆ –ಆದರೆ ಅದು ಇಲ್ಲಿನ ಪರಿಸರಕ್ಕೆ ಸಿಕ್ಕಿದ ಬಿಡುಗಡೆಯನ್ನು ಕಳೆದುಕೊಳ್ಳುವಂತಹುದು ಎಂಬುದು ಕೃತಿಯಲ್ಲಿ ತಿಳಿಸಲಾಗಿದೆ. ಪ್ರಾದೇಶಿಕ ಜೀವನ ಸಂಸ್ಕೃತಿಯನ್ನು ಹಿಡಿದಿಡುತ್ತಾ 'ಗಾಂಧಿ ಬಂದ' ಶೀರ್ಷಿಕೆಯು ಹೊಸ ಬದಲಾವಣೆ – ಮೌಲ್ಯದ ಪ್ರವೇಶ ನಿರೀಕ್ಷೆ– ಕನಸು – ಸಹಜತೆ – ಬದುಕಿನ ಕ್ರಿಯಾಶೀಲತೆಯನ್ನು ಕಾಯ್ದುಕೊಳ್ಳುವ ಸಂಕೇತವಾಗಿ ಮೂಡಿ ಬಂದಿದೆ. ಓರ್ವ ಮನುಷ್ಯ ಸಾಮಾಜಿಕ ವ್ಯವಸ್ಥೆಯ, ಸಂಸ್ಕೃತಿಯ ಒಂದು ಭಾಗ –ಇಲ್ಲಿ ನಂಬಿಕೆ ಅಕ್ಕರೆ ಪ್ರೀತಿ ದ್ವೇಷ ಸಾಧನೆಗಳು ಅಧ್ಯಾಯಗಳಲ್ಲಿ ಕಾಣಿಸಿಕೊಂಡಿದೆ. ಪ್ರಕೃತಿಯಲ್ಲಿ ಜೀವಿಸಬೇಕಾದ ಮನುಷ್ಯನ ಬದುಕು ಚರ್ಮದ ಪದರಿನಂತೆ, ಮಣ್ಣಿನ ರಚನೆಯಂತೆ, ಬೇರ್ಪಡಿಸಿದರೆ, ಸಡಿಲಿಸಿದರೆ ಹೊಸ ಹುಟ್ಟಾಗಿ ನಂತರ ಪ್ರಕೃತಿಯನ್ನೆ ಬಳಸಬೇಕೆಂಬ ಎಚ್ಚರವನ್ನು ಕಾದಂಬರಿಯು ಧ್ವನಿಸುತ್ತದೆ.

ಪ್ರಕೃತಿ ಮತ್ತು ಮನುಷ್ಯನ ನಂಟು ಅನಾದಿ ಕಾಲದ್ದು. ಈ ಪ್ರಕೃತಿಯಲ್ಲಿದ್ದ ಮನುಷ್ಯ ನಾಗರಿಕತೆಗೆ ತೊಡಗಿಕೊಂಡಾಗ ಅವನ ಮೇಲೆ ಧರ್ಮ, ಪ್ರಭುತ್ವ, ವಿಜ್ಞಾನಗಳು ಸವಾರಿ ಮಾಡಿದವು. ಹೀಗಾದಾಗ ನಾಗರಿಕತೆಯೊಳಗೆ ಹುಟ್ಟಿಕೊಂಡ ಪಿರಾಮಿಡ್ ಆಕೃತಿಯ ಜಾತಿ ವರ್ಗಗಳು

ಕಾಣಿಸಿಕೊಂಡವು. ಇದನ್ನು ಮೀರಿ ಒಂದು ಸಂಸ್ಕೃತಿಯನ್ನು ಕಟ್ಟಿಕೊಡಬೇಕಾದ ಅನಿವಾರ್ಯ ತುರ್ತನ್ನು ತಿಳಿಸುವುದು ಕಾದಂಬರಿಯ ಉದ್ದೇಶಗಳಲ್ಲಿ ಒಂದಾಗಿದೆ. **'ಗಾಂಧಿ ಬಂದ'** ಈ ನಾಡಿನ ಸಾಂಸ್ಕೃತಿಕ ಬೇರುಗಳ ಕಟ್ಟುವಿಕೆಯನ್ನು ಹೇಳುತ್ತದೆ. ಇದು ಕಾದಂಬರಿಯ ಪ್ರಮುಖ ಆಶಯವೂ ಆಗಿದೆ. ಇದನ್ನು ಅಧ್ಯಯನದಲ್ಲಿ ಗುರುತಿಸಲಾಗುವುದು.

ಗಾಂಧಿ ಬಂದ ಕೃತಿಯು ಈ ಎಲ್ಲಾ ವರ್ಗದ ಜನರ ಚಹರೆಗಳನ್ನು ಪ್ರಮುಖ ಪಾತ್ರಗಳ ಮೂಲಕ ಅಂದರೆ ದ್ರೌಪದಿ – ಅದ್ರಾಮ – ದಾರು– ಮಾರಪ್ಪ – ಸೂರಕ್ಕೆ – ಕಾರ್ನಾಡರು – ಶೆಟ್ಟಿಜನ ವರ್ಗದವರು. ಬ್ರಾಹ್ಮಣೇತರ ವರ್ಗದ ಜನರು, ಪುಟ್ಟಮ್ಮಕ್ಕ–ರುಕುಣಿಯಮ್ಮ – ಹೆಬ್ಬಾರರು ಮೊದಲಾದವರ ಮೂಲಕ ವಿವರಿಸುತ್ತದೆ. ಸಾಮಾಜಿಕ ಸ್ಥಿತಿ, ಪ್ರಕೃತಿಯ ನಿಗೂಢತೆಯನ್ನು ಸೃಜನಶೀಲವಾಗಿ ಕಟ್ಟಿಕೊಡುವ ವಿಧಾನದ ಮೂಲಕ ಹೇಳುತ್ತಾ ಹೋಗುವುದು ನಾಗವೇಣಿಯವರ ಬರವಣಿಗೆಯ ವಿಶಿಷ್ಟತೆಯೂ, ವಿಧಾನವೂ ಆಗಿದೆ. ಇಲ್ಲಿ ಸಂವೇದನೆಗಳು ಮತ್ತು ವಾಸ್ತವಗಳು ಹೇಗೆ ಮುಖಾಮುಖಿಯಾಗುತ್ತವೆ ಎಂಬುದನ್ನು ವಿವರಿಸಲಾಗಿದೆ.

ಕಡಲನ್ನು ತಾಯಿಗೆ ಹೋಲಿಸಲಾಗಿದೆ. ಆ ಮೂಲಕ ಸ್ತ್ರೀಪರ ಆಲೋಚನೆಯೊಂದಿಗೆ ಮಾನವತಾವಾದಕ್ಕೆ ಮಹತ್ವ ಕೊಡಲಾಗಿದೆ. ಧರ್ಮದ ದಾಳವಾಗಿ ಹೆಣ್ಣನ್ನು ಬಳಸುವಾಗ ಉಂಟಾಗುವ ಸ್ಥಿತಿಯನ್ನು ವಿವರಿಸಲಾಗಿದೆ. ಧರ್ಮದ ಸಂಕೇತವಾಗಿರುವ ಹೆಬ್ಬಾರರು ಮಗಳನ್ನು ಬಿಟ್ಟುಕೊಡುತ್ತಾರೆ ಹೊರತು, ಜನಿವಾರವನ್ನಲ್ಲ. ದ್ರೌಪದಿಯ ಮದುವೆ ಅದ್ರಾಮನೊಂದಿಗೆ ನಡೆದು ಹೋಗುತ್ತದೆ. ಇದು ಸ್ತ್ರೀಯಾಗಿ ದ್ರೌಪದಿ ಆರಿಸಿಕೊಂಡ ಬದುಕು. ತುಳುನಾಡಿನ ಬದುಕಿನಲ್ಲಿ ನಡೆಯುವ ಸಂಘರ್ಷವನ್ನು ಹೆಣ್ಣಿನ ಬದುಕಿನ ಮೇಲೆ ಬೀರಿದ ಪ್ರಭಾವವನ್ನು ಇದು ಸೂಚಿಸುತ್ತದೆ. ಆದರೆ ಪುಟ್ಟಮ್ಮಕ್ಕ ಗಂಡನ ಸೇವೆ ಮಾಡುವ ಮೃದು ಹೃದಯದ ಹೆಣ್ಣಾಗಿಯೆ ಉಳಿಯುತ್ತಾಳೆ. ಇಲ್ಲಿ ಸಾಮಾಜಿಕ ಸಂಘರ್ಷದಲ್ಲಿ ಸ್ತ್ರೀಯರು ಗೆಲುವನ್ನು ಪಡೆದುಕೊಳ್ಳುತ್ತಾರೆ. ಮೌನವನ್ನು ಮೌಲ್ಯವಾಗಿರಿಸಿಕೊಂಡು ಬಂದ ಸಾಮಾಜಿಕ ಸಂರಚನೆಯ ವಿರುದ್ಧ ಧ್ವನಿ ಎತ್ತಿ ಮಾತನಾಡುತ್ತಾರೆ. ಪುರುಷ ಕೇಂದ್ರಿತ ಚಿಂತನಾ ಕ್ರಮವು ಮಾರಪ್ಪನ ತಾಯಿ ಸೂರಕ್ಕನ ಯೋಚನೆಯಲ್ಲಿ ವ್ಯಕ್ತವಾಗಿದೆ. ಪುಟ್ಟಮ್ಮಕ್ಕಳು ಗಾಂಧಿಗೆ ನಿಧಿ ಅರ್ಪಿಸುತ್ತಾಳೆ. ಕೊನೆಗೆ ಅವಳಿಗೆ ನಿಜ ಪ್ರಪಂಚದ ಅರಿವಾಗುತ್ತದೆ. ಇಲ್ಲಿನ ಸಂಘರ್ಷದಲ್ಲಿ ಸ್ತ್ರೀಪರ ದೃಷ್ಟಿಕೋನವಿದೆ. ದಾರುವು ಬಂಜೆಯಾಗಿ ಉಳಿಯುವುದು ಸಮಾಜದ ದೃಷ್ಟಿಯಲ್ಲಿ ಅಪರಾಧ ದೋಷವೆಂಬಂತೆ ಚಿತ್ರಿತವಾಗಿದೆ. ಹೆಣ್ಣನ್ನು ಹೆಣ್ಣೆ ಸಮಾಧಾನ ಪಡಿಸುವ ಸ್ಥಿತಿ ಅನಿವಾರ್ಯವಾಗಿದೆ ಎಂಬುದನ್ನು ಕಾದಂಬರಿಯು ಸೂಚ್ಯವಾಗಿ ತಿಳಿಸುತ್ತದೆ. ಪಾತ್ರಗಳು ತನ್ನ ಬಗ್ಗೆ ಸ್ವವಿಮರ್ಶೆ ಮಾಡಿಕೊಳ್ಳುವುದು ಮಹತ್ತರ ಅಂಶವಾಗಿದೆ. ಸ್ತ್ರೀ ಸುಧಾರಣೆಗೆ ಪುರುಷ ಸಮಾಜದ ಸಹಾಯ ಅವಶ್ಯ ಮತ್ತು ಅನಿವಾರ್ಯ ಎಂಬ ಧ್ವನಿ ಕಾದಂಬರಿಯಲ್ಲಿದೆ. ಸ್ತ್ರೀ ಪಾತ್ರಗಳಲ್ಲಿ ಪ್ರಮುಖವಾದುದು ದ್ರೌಪದಿ. ಈಕೆಯು ಗಾಂಧಿ ಮೌಲ್ಯವನ್ನು ತಿಳಿದವಳು. ಇನ್ನೊಬ್ಬರಿಗೆ ತಿಳಿಸುವವಳು (ಉದಾ: ಅಂತಪ್ಪನಿಗೆ). ಇಲ್ಲಿ ಬರುವ ರುಕುಣಿಯಮ್ಮನಿಗೆ ಗಾಂಧಿಯನ್ನು ನೋಡುವ ಆಸೆಯಿದ್ದರೂ ಈಕೆಗೆ ಗಂಡನ ಸೇವೆ ಮಾಡುವ ಅನಿವಾರ್ಯತೆ ಇದೆ. ಹೀಗೆ ಸ್ತ್ರೀಪರ ದೃಷ್ಟಿಕೋನವನ್ನು ಕಾದಂಬರಿ ಹೊಂದಿದೆ. ಈ ಅಂಶಗಳನ್ನು ಅಧ್ಯಯನ ಮಾಡಲಾಗುವುದು.

**ಅಧ್ಯಯನದ ವಿಧಾನ ಮತ್ತು ತಾತ್ವಿಕತೆ:**

ಒಂದು ರೀತಿಯ ಕೃತಿಕೇಂದ್ರಿತ ವಿಶ್ಲೇಷಣಾತ್ಮಕ ಮಾದರಿಯನ್ನು ಅಧ್ಯಯನದಲ್ಲಿ ಅನುಸರಿಸಲಾಗುವುದು. ಕೃತಿಯನ್ನು ಕೇಂದ್ರವಾಗಿಟ್ಟುಕೊಂಡು ಸ್ವಾತಂತ್ರ್ಯಪೂರ್ವದ ಸ್ವಾತಂತ್ರ್ಯ ಹೋರಾಟದ ಸಂದರ್ಭದ ತುಳುನಾಡಿನ ಸಾಂಸ್ಕೃತಿಕ ಸ್ಥಿತ್ಯಂತರವನ್ನು ಗುರುತಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಅದು ಗಾಂಧಿ ಚಿಂತನೆಗಳು ಇಲ್ಲಿನ ಬದುಕಿನ ಮೇಲೆ ಬೀರಿದ ಪರಿಣಾಮ ಮತ್ತು ಅದರಿಂದ ಉಂಟಾದ ಪರಿವರ್ತನೆಯನ್ನು ಕೃತಿಯ ಮೂಲಕ ಗುರುತಿಸುವುದು ಅತೀ ಮುಖ್ಯವಾಗಿದೆ. ಈ ದೃಷ್ಟಿಯಿಂದ ಕೃತಿ ಕೇಂದ್ರೀಕೃತ ಅಧ್ಯಯನವಾದರೂ ಆ ಕಾಲದ ಚಾರಿತ್ರಿಕ ಅಂಶಗಳನ್ನು ಅಧ್ಯಯನಕ್ಕೆ ಪೂರಕವಾಗಿ ಬಳಸಲಾಗುವುದು. ಅದರೊಂದಿಗೆ ಗಾಂಧೀಜಿಯ ಚಿಂತನೆಗಳ ಕುರಿತಾದ ಚರ್ಚೆಯನ್ನು ಅಧ್ಯಯನ ಸಂದರ್ಭದಲ್ಲಿ ಗಮನಿಸಲಾಗುವುದು. ಸಂಸ್ಕೃತಿ ಚರ್ಚೆಯ ಸಂದರ್ಭದಲ್ಲಿ ಈ ಎಲ್ಲಾ ಅಂಶಗಳು ಮುಖ್ಯವಾಗುತ್ತವೆ. ಆದರೆ ಸಾಹಿತ್ಯದ ಅಧ್ಯಯನ ವಾದುದರಿಂದ ಕೃತಿನಿಷ್ಠ ವಿಶ್ಲೇಷಣಾತ್ಮಕ ರೀತಿಯ ಚರ್ಚೆಗೆ ಹೆಚ್ಚು ಗಮನ ನೀಡಲಾಗಿದೆ. ಪೂರಕವಾಗಿ ಇತರ ಮಹಿತಿಗಳನ್ನು ಬಳಸಿಕೊಳ್ಳಲಾಗುವುದು.

**ಉಪಸಂಹಾರ:**

ಒಟ್ಟಿನಲ್ಲಿ ಕನ್ನಡದ ಒಳ್ಳೆಯ ಕಾದಂಬರಿಗಳಲ್ಲಿ ಒಂದಾದ ಗಾಂಧಿ ಬಂದ ಕೃತಿಯಲ್ಲಿ ತುಳುನಾಡಿನ ಜೀವನ ಕ್ರಮದಲ್ಲಾದ ಸ್ಥಿತ್ಯಂತರಗಳಿಗೆ ಗಾಂಧಿ ಬರುವುದರ ಮೂಲಕ ಉತ್ತರ ಸಿಗುತ್ತದೆ. ತುಳುನಾಡು ಹೊಂದಿರುವ ವಿಶಿಷ್ಟವಾದ ಜೀವನ ಶೈಲಿ, ಅಲ್ಲಿರುವ ಅನುಭವಗಳು ಅಧ್ಯಾಯದಿಂದ ಅಧ್ಯಾಯಕ್ಕೆ ಬೆಳೆಯುತ್ತಾ ಹೋಗಿದೆ. ಕುತೂಹಲ, ನಿರೀಕ್ಷೆ, ಬೇಸರ, ಸಂಕಟ, ಸಾಮರಸ್ಯಗಳಿಗೆ ಪರಿಹಾರವನ್ನು ಕಾದಂಬರಿ ಹಂತ ಹಂತವಾಗಿ ಕಂಡುಕೊಂಡಿದೆ. ಒಂದು ಸಾಂಸ್ಕೃತಿಕ ಬದುಕಿನ ಮುಖಾಮುಖಿಯೊಂದಿಗೆ ಸಂಘರ್ಷ ಸಾಮರಸ್ಯವನ್ನು ಸ್ಪಷ್ಟವಾಗಿ ನಿರೂಪಿಸಿದೆ. ತುಳುನಾಡ ಪರಂಪರೆಯ ನಿಚ್ಚಳ ಅನುಭವದ ಸಂಗ್ರಹ ಈ ಕೃತಿ. ಮಹಿಳಾ ಸಾಹಿತ್ಯ ಲೋಕಕ್ಕೆ ವಿಶಿಷ್ಟ ಸಾಹಿತ್ಯ ಚಿಂತನೆಯನ್ನು ನೀಡಿದ ಕಾದಂಬರಿ ಇದಾಗಿದೆ. ಸರಳವಾದ ಭಾಷೆ, ವಿವರಗಳು, ಘಟನೆಗಳು, ಚಿಂತನೆಗಳಿಂದ ಕಾದಂಬರಿಯು ಪಕ್ವವಾಗಿದೆ.

# ಅಧ್ಯಾಯ ಎರಡು

# ಆಧುನಿಕತೆಯಿಂದ ಸ್ಥಿತ್ಯಂತರಗೊಳ್ಳುತ್ತಿರುವ ತುಳುನಾಡು

ಸ್ವಾತಂತ್ರ್ಯ ಪೂರ್ವದಲ್ಲಿ ತುಳುನಾಡಿನ ಜನ ಜೀವನದಲ್ಲಿ ವ್ಯಾಪಕ ಬದಲಾವಣೆಯ ಗಾಳಿ ಬೀಸ ತೊಡಗಿತು. ಆಧುನಿಕ ಶಿಕ್ಷಣ ಮತ್ತು ಕೈಗಾರಿಕೀಕರಣ ಈ ಬದಲಾವಣೆಗಳಿಗೆ ಮುಖ್ಯ ಕಾರಣ. ಈ ಬದಲಾವಣೆ ಉಂಟು ಮಾಡಿದ ಸಾಮಾಜಿಕ ಪರಿವರ್ತನೆಗಳನ್ನು ಸ್ಥಿತ್ಯಂತರ ಎಂದು ಕರೆಯಬಹುದು. ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕಿನ ಎಲ್ಲಾ ಸ್ತರಗಳಲ್ಲೂ ಈ ಸ್ಥಿತ್ಯಂತರವನ್ನು ಗುರುತಿಸಬಹುದು. ತುಳುನಾಡಿನ ಸಮಾಜದಲ್ಲಿ ಬ್ರಾಹ್ಮಣ, ಗೌಡ ಸಾರಸ್ವತ, ವಿಶ್ವಕರ್ಮ, ಜೈನ, ಬಂಟ, ಬಿಲ್ಲವ, ಮಡಿವಾಳ, ಪರವ, ಪಂಬದ, ಕುಲಾಲ, ನಲಿಕೆ, ಮನ್ಸ, ಮುಗೇರ ಮುಂಡಾಲ, ಕೊರಗ, ಬ್ಯಾರಿ, ಕ್ರಿಶ್ಚಿಯನ್-ಹೀಗೆ ಹಲವು ಜಾತಿ ಧರ್ಮಗಳ ಜನವರ್ಗದವರು ಬದುಕುತ್ತಿದ್ದಾರೆ. ಸಾಮಾಜಿಕ ನೆಲೆಯಿಂದ ವರ್ಣ ವರ್ಗಗಳು ಸೃಷ್ಟಿಯಾಗಿದ್ದವು. ಬ್ರಾಹ್ಮಣ, ಕ್ಷತ್ರಿಯ , ವೈಶ್ಯ, ಶೂದ್ರ ಎನ್ನುವ ಸಾಮಾಜಿಕ ರಚನೆಯ ವ್ಯವಸ್ಥೆಯು ಇಲ್ಲಿ ಭಿನ್ನ ರೀತಿಯಲ್ಲಿ ಸಕ್ರಿಯವಾಗಿದೆ. ಶೈಕ್ಷಣಿಕ ಸಂದರ್ಭಗಳು ಆಹಾರ, ಆಲೋಚನೆ, ಬದುಕಿನ ಮೇಲೆ ನಿಯಂತ್ರಣ ಸಾಧಿಸಿದವು. ಆರ್ಥಿಕ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ವಿಚಾರಗಳನ್ನು ಬಹು ಸೂಕ್ಷ್ಮವಾಗಿ ಕಾಯ್ದುಕೊಂಡು ಬಂದವು ಪೂರ್ಣವಾಗಿ ಮನುಷ್ಯ ನಿಸರ್ಗದೊಂದಿಗೆ ಸಾವಯವ ಸಂಬಂಧಗಳನ್ನು ಬೆಳೆಸಿಕೊಂಡನು. ಭೂಮಿ, ಆಕಾಶ, ಸೂರ್ಯ, ಚಂದ್ರ, ನಿಸರ್ಗ, ಹಿರಿಯರ ಆತ್ಮಗಳು ಅಳತೆಗೆ ಮೀರಿದ ಭೌತಿಕ ಸೃಷ್ಟಿಗಳಾದವು. ತುಳುನಾಡಿನ ಆರಾಧಕಾ ಶಕ್ತಿಗಳಾದವು. ಸಮಾಜದಲ್ಲಿ ಹುಟ್ಟಿದ ಸಂಘರ್ಷಗಳನ್ನು ಇವುಗಳ ಮೂಲಕ ನಿಯಂತ್ರಿಸುವುದು ಸಾಧ್ಯವಾಯಿತು. ಭೂತಪ್ರೇತಗಳು ಆರಾಧನೆಗೆ ಒಳಗಾದವು. ಬಲಿಕ್ರಿಯೆಗಳು ಬೆಳೆದವು. ಉದ್ದೇಶಗಳ ಈಡೇರಿಕೆಗೆ ಆಗೆಲು, ತಂಬಿಲ, ಕೋಲ, ನೇಮ, ಮೆಚ್ಚಿ, ಮೈಮೆ ಈ ನೆಲೆಯಲ್ಲಿ ವಿಸ್ತರಣೆಗೊಂಡಿತು. ಕೆಡ್ಡಸ ಕಂಬಳದಂಥ ಫಲವಂತಿಕೆಯ ಸಾಂಕೇತಿಕ ಆಚರಣೆಗಳು ಹುಟ್ಟಿದವು. ತುಳು ಜನರು ದೈವಗಳನ್ನು ಆರಾಧಿಸಲು ಪ್ರಾರಂಭಿಸಿದರು. ಜಾತಿ ಜನಾಂಗದ ವೀರರು, ವೀರವನಿತೆಯರು ಆತ್ಮ ಬಲಿದಾನ ದುರಂತಗಳಿಗೆ ಒಳಗಾಗಿ ದೈವತ್ವವನ್ನು ಪಡೆಯುತ್ತಿದ್ದರು. ಇದಲ್ಲದೆ ಹಿರಿಯರ ಆತ್ಮಗಳನ್ನು ಇವರ ಮೂಲಕ ನೋಡಲು ಪ್ರಯತ್ನಿಸಿದರು. ಈ ಎಲ್ಲಾ ಸ್ತರ ವಿನ್ಯಾಸಗಳೊಂದಿಗೆ ತುಳು ನಾಡಿನ ಸಮಾಜ ರಚನೆಯಾಗಿತ್ತು.

ವಿಜ್ಞಾನದ ಅವಿಷ್ಕಾರಗಳು ಮತ್ತು ಹೊಸ ಚಿಂತನೆಗಳು ಆಧುನಿಕತೆಗೆ ಕಾರಣವಾಗಿದೆ. ಪಾಶ್ಚಿಮಾತ್ಯ ಜಗತ್ತಿನಲ್ಲಿದ್ದ ಆಧುನಿಕತೆ ಇಂಗ್ಲೀಷರು ಮತ್ತು ಇಂಗ್ಲೀಷಿನ ಮೂಲಕ ಭಾರತವನ್ನು ಪ್ರವೇಶಿಸಿತು. ಅದು ಕ್ರೈಸ್ತ ಮಿಷನರಿಗಳ ಮೂಲಕ ತುಳುನಾಡನ್ನು ಪ್ರವೇಶಿಸಿತು. ಈ ಮೇಲಿನ ತುಳುನಾಡಿನ ಸಾಂಸ್ಕೃತಿಕ ಬದುಕು ಆಧುನಿಕತೆ ಪ್ರಭಾವದಿಂದ ಸ್ಥಿತ್ಯಂತರಗೊಳ್ಳುತ್ತಿರುವುದನ್ನು ತುಳುನಾಡಿನ ಬದುಕನ್ನು ಗಾಂಧಿ ಬಂದ ಕಾದಂಬರಿಯನ್ನು ಕೇಂದ್ರವಾಗಿಟ್ಟುಕೊಂಡು ವಿಶ್ಲೇಷಿಸಬಹುದಾಗಿದೆ. ಹೀಗೆ ವಿಶ್ಲೇಷಿಸುವಾಗ ತುಳುನಾಡಿನ ಭೌಗೋಳಿಕ ಪರಿಸರ ಮತ್ತು

ಸಂಸ್ಕೃತಿಯ ಅನನ್ಯತೆಯನ್ನು ವಿವರಿಸಬೇಕಾಗುತ್ತದೆ. ತುಳುನಾಡಿನ ಭೌಗೋಳಿಕ ಪರಿಸರವು ವೈವಿಧ್ಯಮಯವಾದುದು. ಗುಡ್ಡ ಇಳಿಜಾರು ಬಯಲು ಪ್ರದೇಶ, ನದಿ ಮುಖಜ ಭೂಮಿಗಳು, ಒರತೆಗಳು ಪ್ರಕೃತಿಯೊಂದಿಗೆ ಅನನ್ಯತೆಯನ್ನು ಬೆಳೆಸಿಕೊಂಡಿದೆ. ಭೌಗೋಳಿಕ ಸ್ಥಿತಿಯು ಹವಾಮಾನದ ಜೊತೆಗೆ ನಂಟನ್ನು ಉಳಿಸಿಕೊಂಡಿದೆ. ಕಡಲ ಮೊರೆತಗಳೊಂದಿಗೆ ಮಳೆಯನ್ನು, ಅತಿ ಪ್ರಮಾಣದಲ್ಲಿ ದಾಖಲಿಸಿದ ನೆಲ ಕರಾವಳಿ. ಹಾಗೆ ಇಲ್ಲಿನ ಭೌಗೋಳಿಕ ಸ್ಥಿತಿ ಸಂಸ್ಕೃತಿಯನ್ನ ನಿರ್ಧರಿಸಿದೆ. ಈ ಸಂಸ್ಕೃತಿಯಲ್ಲಿ ಆಧುನಿಕತೆ, ಗಾಂಧಿಯ ಬರುವಿಕೆ ರೂಪದಲ್ಲಿ ತರುವ ಬದಲಾವಣೆಗಳನ್ನ ಹೀಗೆ ಗುರುತಿಸಬಹುದು.

## <u>ಸಾಮರಸ್ಯದ ಸಂಕೇತವಾಗಿ ಗಾಂಧಿ:</u>

**'ಗಾಂಧಿ'** ಮೌಲ್ಯ ಬದಲಾವಣೆಯ ಸಂಕೇತವಾಗಿ ಕಾದಂಬರಿಯಲ್ಲಿ ಕಾಣಿಸಿಕೊಂಡಿದೆ. ಗಾಂಧಿಯ ಆಗಮನವನ್ನು ತುಳುನಾಡು ಪ್ರಗತಿಪರ ಸ್ಥಿತ್ಯಂತರವೆಂದು ನಂಬಿದೆ. ಜಾತಿ, ಮತಧರ್ಮಗಳನ್ನು ಮೀರಿ ಮಾನವ ಸಿದ್ಧಾಂತದ ನೆಲೆಯಲ್ಲಿ ತುಳುನಾಡಿನ ಜನರು ಗಾಂಧಿಯನ್ನು ಸ್ವಾಗತಿಸಿದ್ದಾರೆ. ಮನುಷ್ಯರೆಲ್ಲರೂ ಪರಸ್ಪರ ಅರಿತುಕೊಂಡು ಸಮೂಹದ ನೆಲೆಯಲ್ಲಿ ಬದುಕುವುದೇ ಮುಖ್ಯವೆಂಬ ಅರಿವು ಮೂಡಿತು. ಒಂದು ಆರೋಗ್ಯಪೂರ್ಣ ಸ್ಥಿತ್ಯಂತರ ನಡೆದುಹೋಗುತ್ತದೆ. ಬೌದ್ಧಿಕವಾಗಿ ಅಸ್ಪೃಶ್ಯರು ಚೇತರಿಸಿಕೊಳ್ಳುತ್ತಾರೆ. ಗಾಂಧಿ ಮೌಲ್ಯಗಳಾದ ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಸಂಗ್ರಹ, ಶರೀರಶ್ರಮ, ಆಸ್ವಾದ, ಸರ್ವತ್ರ, ಭಯವರ್ಜನ, ಸರ್ವಧರ್ಮಸಮಾನತ್ವ, ಸ್ವದೇಶಿ, ಸ್ಪರ್ಶಭಾವನಾ ಈ ಹನ್ನೊಂದು ಸೂತ್ರಗಳು ಸಾಮಾಜಿಕ ರಚನೆಯನ್ನು ಪ್ರವೇಶಿಸುವ ಪ್ರಯತ್ನ ನಡೆಯಿತು. ವಸಾಹತುಶಾಹಿ ಮತ್ತು ಬಂಡವಾಳಶಾಹಿ ಆಲೋಚನೆಗಳನ್ನು ಧ್ವಂಸ ಮಾಡುವ ಪ್ರಯತ್ನ ಉಂಟಾಯಿತು. ಪರಿಣಾಮ ದುಡಿಯುವ ವರ್ಗದ ಸ್ವರೂಪದಲ್ಲಿ ಬದಲಾವಣೆಯಾಯಿತು. ಒಗ್ಗಟ್ಟು ನಂಬಿಕೆ ಜನಸಮೂಹದಲ್ಲಿ ಬೆಳೆಯಿತು. ಆರ್ಥಿಕ ಪಲ್ಲಟ ಉಂಟಾಯಿತು. ಆರ್ಥಿಕ ಸ್ಥಿತ್ಯಂತರವು ತುಳುನಾಡ ಜನರಿಗೆ ಜೀವನದಲ್ಲಿ ಉತ್ಸಾಹವನ್ನು ತುಂಬಿದವು. ವ್ಯಕ್ತಿ ಸ್ವಾತಂತ್ರ್ಯದ ಪ್ರಮುಖ ಭಾಗವಾದ ಅಭಿವ್ಯಕ್ತಿ, ಆಲೋಚನೆಗಳನ್ನು ಕಂಡುಕೊಳ್ಳಲು ದುಡಿಯುವ ವರ್ಗಕ್ಕೆ ಸಾಧ್ಯವಾಯಿತು. ಭೂಮಿಯ ಬಳಕೆ ಮತ್ತು ಧರ್ಮದ ಪ್ರವೇಶದ ಕುರಿತ ಸ್ವಾತ್ರಂತ್ರ್ಯ ಲಭ್ಯವಾಯಿತು. ದುಡಿಯುವ ವರ್ಗ ತುಳುನಾಡಿನಲ್ಲಿ ಆಳುವ ಬಂಟಜಾತಿಗೆ ಹತ್ತಿರವಾದರು. ಸ್ಥಗಿತ ನಂಬಿಕೆಗಳ ಸ್ಥಳದಲ್ಲಿ ಚಲನೆ ಉಂಟಾಯಿತು. ವ್ಯವಸ್ಥೆಯ ದೋಷಗಳು ಕಾಣಿಸಿಕೊಂಡವು. ಎಚ್ಚರಿಕೆಯ ಕರೆ ಗಂಟೆಯಾಗಿ, ಮೌಲ್ಯವಾಗಿ, ಗಾಂಧಿಯ ಪ್ರವೇಶ ಈ ಸಂದರ್ಭದಲ್ಲಿ ನಡೆಯಿತು.

ಗಾಂಧಿ ಮೌಲ್ಯದ ಪ್ರವೇಶವು ಸ್ವಾತಂತ್ರ್ಯದ ಸಂದರ್ಭವನ್ನು ಕಟ್ಟುವ ಸ್ಥಿತಿ. ಬಂಧನಗಳಿಂದ ಮುಕ್ತವಾದ ಸ್ಥಿತಿಯೇ ಸ್ವಾತ್ರಂತ್ರ್ಯ. ಪ್ರಭುತ್ವದಲ್ಲಿ ನಂಬಿಕೆಯಿಟ್ಟ ಶ್ರೀಮಂತರಿಂದ ಜನಸಾಮಾನ್ಯರಿಗೆ

ಸಮಸ್ಯೆಯಾಯಿತು. ಪ್ರಭುತ್ವದ ಅಧಿಕಾರದ ನಿರಂಕುಶ ನಿರ್ಬಂಧವನ್ನು ಗಾಂಧಿ ಚಿಂತನೆಗಳು ಬದಲಾಯಿಸಿದವು. ಗಾಂಧಿಯ ಉಪ್ಪಿನ ಸತ್ಯಾಗ್ರಹ ಜನರ ಮೇಲೆ ಪ್ರಭಾವ ಬೀರಿತು. ವರ್ಣ ವರ್ಗದ ಅಂತರದಲ್ಲಿ ಕೊರಗರಂಥ ದಲಿತರಿಗೂ 'ಅರಿವು' ಉಂಟಾಯಿತು. ಹೊಸ ಬದುಕನ್ನು ಕಟ್ಟುವ ತುರ್ತಿನಲ್ಲಿ ಗಾಂಧಿಯನ್ನು ಬರಮಾಡಿಕೊಂಡರು. ನಡೆ – ನುಡಿಗಳ ಸಾಂಗತ್ಯ ಗಾಂಧೀಜಿಯ ಪ್ರಮುಖ ಆಶಯವಾಗಿತ್ತು. ಭೂಒಡೆತನವನ್ನು ಪಡೆಯಬೇಕು. ಆ ಮೂಲಕ ಸ್ವಂತ ಹಿಡುವಳಿದಾರರು ಆಗಬೇಕೆಂಬ ಆಶಯದಲ್ಲಿ ಅಸ್ಪೃಶ್ಯರಿಗೆ ಸಹಕಾರ ನೀಡಿದರು. ಗಾಂಧಿಯ ಪ್ರವೇಶವು ದುಡಿಯುವ ವರ್ಗದಲ್ಲಿ ಬದಲಾವಣೆಯನ್ನು ಮಾಡಿತು. ಗಾಂಧಿಯ ಅಸ್ಪೃಶ್ಯತಾ ನಿವಾರಣೆ, ಮೀಸಲಾತಿಯ ಕುರಿತಾದ ದೃಷ್ಟಿಕೋನ ಇತ್ಯಾದಿಗಳು ಸ್ವಾಭಿಮಾನವನ್ನು ಮೂಡಿಸಿದೆ. ಗಾಂಧಿಯ ಚಿಂತನೆಗಳು ಶ್ರಮ ಸಂಸ್ಕೃತಿಯ ಒಳಗೆ ಪ್ರವೇಶ ಮಾಡಿದೆ. ಸತ್ಯಾಗ್ರಹದ ಕಲ್ಪನೆಯ ಬಗ್ಗೆ ಇವರಿಗೆ ಅರಿವು ಎಚ್ಚರ ಬಂದಿದೆ. ಅದ್ರಾಮ ಮುಸ್ಲಿಂ ಬ್ಯಾರಿ ಜನಾಂಗಕ್ಕೆ ಸೇರಿದವನು. ಗಾಂಧಿವಾದಿ – ಹಿಂದೂ ಬ್ರಾಹ್ಮಣವಾದಿ ಧರ್ಮಶಾಸ್ತ್ರವನ್ನು ಅದ್ರಾಮ ಪ್ರಶ್ನಿಸುತ್ತಾನೆ. ತನ್ಮೂಲಕ ಹೆಬ್ಬಾರರ ಕೋಪಕ್ಕೆ ಗುರಿಯಾಗುತ್ತಾನೆ. ಮುಸ್ಲಿಂ ಅದ್ರಾಮು ಹಿಂದೂ ಧರ್ಮಶಾಸ್ತ್ರವನ್ನು ಪ್ರಶ್ನಿಸುವುದು ವಿಶಿಷ್ಟ ಘಟನೆಯಾಗುತ್ತದೆ. ಗಾಂಧಿಯಲ್ಲಿ ಸಾಮಾನ್ಯ ಮನುಷ್ಯನ ಬದುಕಿನ ಒಳಗೆ ಪ್ರವೇಶ ಮಾಡುವ ಶಕ್ತಿಯಿದೆ ಎಂಬುದಕ್ಕೆ ಇದು ಸಾಕ್ಷಿಯಾಗಿದೆ. ಈ ಮೂಲಕ ತುಳುನಾಡಿನಲ್ಲಿ ದಲಿತರು, ದುರ್ಬಲರು, ಆತ್ಮಗೌರವವನ್ನು ಸ್ವಲ್ಪ ಮಟ್ಟಿಗೆ ಪಡೆದು ಕೊಳ್ಳಲು ಸಾಧ್ಯವಾಯಿತು.

ಗಾಂಧೀಜಿಯವರು ಅಗ್ನಿ ದಿವ್ಯಕ್ಕೆ ಒಳಗಾಗಿದ್ದವರು. ಏನೇ ಕಷ್ಟ ಬಂದರೂ ಎದುರಿಸುವ ಅನುಭವವೇ ಅಗ್ನಿ ದಿವ್ಯ. ಇದನ್ನು ಹೋರಾಟಗಾರ ಮಾರಪ್ಪ, ಅದ್ರಾಮರು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸುವುದರ ಮೂಲಕ ಇದನ್ನು ವ್ಯಕ್ತಪಡಿಸಿದರು.

ಗಾಂಧಿ ಜಾತಿಯನ್ನು ಒಪ್ಪಿಕೊಂಡಿದ್ದರು. ಆದರೆ ಅಸ್ಪೃಶ್ಯತೆಯನ್ನು ಧಿಕ್ಕರಿಸಿದರು. ಹಿಂದೂ–ಮುಸ್ಲಿಂ ಏಕತೆಯ ಪ್ರಜ್ಞೆಯ ತಳಹದಿಯಲ್ಲಿ ತುಳುನಾಡಿನ ವೃತ್ತಿ ಜಾತಿಯನ್ನೂ, ವ್ಯಾಪಾರ ಜೀವನ ಕ್ರಮವನ್ನೂ ಉಳಿಸಿದೆ. ತುಳುನಾಡಿನಲ್ಲಿ ಜಾತ್ಯಾಧಾರಿತ ವೃತ್ತಿಯಾದ ಮೀನು ಹಿಡಿಯುವುದು, ಅದನ್ನು ಮಾರಾಟ ಮಾಡುವುದು, ಕೃಷಿ ಮಾಡುವುದು ಮುಖ್ಯವಾಗಿದೆ. ಇಲ್ಲಿ ಇಂದು ಕಾಣಿಸುವ ಆಧುನಿಕ ಪ್ರಜ್ಞೆಯು ಜಾತಿಯ ನೆಲೆಯಿಂದ ನಿರ್ಧರಿತ ವೃತ್ತಿಯನ್ನು ಮುಂದುವರಿಸಿದರೂ ಜಾತಿ ಲಕ್ಷಣಗಳು ಅಸ್ತಿರಗೊಂಡವು. ಗಾಂಧೀಜಿ ಜಾತಿಯನ್ನು ಒಪ್ಪಿಕೊಂಡಿದ್ದು ಜೀವನ ನಿರ್ವಹಣೆ ಮಾಡುವ ಈ ನೆಲೆಯಲ್ಲಿ ಪ್ರಭುಗಳು ನಿರ್ಮಾಣವಾಗುವ ಸಮಾಜ ಶೀಲವಂತ ಸಮಾಜವಲ್ಲವೆಂಬುದನ್ನು ಇಲ್ಲಿಯ ಜನರು ಗಾಂಧಿಯ ಮೂಲಕ ಅರಿತರು. ಗಾಂಧಿಯು ಖಾದಿ ತಯಾರಿಕೆಗೆ ಮಹತ್ವ ನೀಡಿರುವುದು ಕಾದಂಬರಿಯೊಳಗೆ ಗಮನಾರ್ಹ. ಖಾದಿಯು ಸ್ವಾವಲಂಬನೆಯ ಸಂಕೇತ. ಸ್ವದೇಶಿ ಚಿಂತನೆಯನ್ನು ಹುಟ್ಟು ಹಾಕುವಂತಹುದು. ಮಾರಪ್ಪ ಮತ್ತು ಅದ್ರಾಮರನ್ನು ದಂಪತಿ ಸಹಿತ ಕಾರ್ನಾಡರು ಕರೆಸಿ

ಔತಣ ಕೊಡುತ್ತಾರೆ. ಆಗ ಇವರು ದ್ರೌಪದಿ, ದಾರುಗೆ ನೂಲುವ ತಕಲಿಗಳನ್ನು ಹಾಗೂ ಮಾರಪ್ಪ ಅದ್ರಾಮರಿಗೆ ಖಾದಿ ಶಲ್ಯೆಯನ್ನು ನೀಡಿರುವುದು ಗಮನಾರ್ಹ ವಿಷಯವಾಗಿದೆ.

ಗಾಂಧಿಯು ತುಳುನಾಡನ್ನು ಪ್ರವೇಶ ಮಾಡಿದಾಗ ಆರ್ಥಿಕ, ಸಾಮಾಜಿಕ, ಧಾರ್ಮಿಕ ಆಲೋಚನೆಗಳು ತುಳುನಾಡಲ್ಲಿ ವ್ಯತ್ಯಾಸಗೊಂಡವು. ಪಾನನಿರೋಧವನ್ನು ಪ್ರೋತ್ಸಾಹಿಸಿದರು. ವಿಧವಾ ವಿವಾಹವನ್ನು ಮಾಡಿಕೊಳ್ಳುವ ಅವಕಾಶ ಇತ್ತು. ದ್ರೌಪದಿಗೆ ಇವರು ಮತ್ತೆ ಮುತ್ತೈದೆ ಭಾಗ್ಯವನ್ನು ನೀಡುವ ಸಂದರ್ಭವು ಕಾದಂಬರಿಯಲ್ಲಿದೆ. ಗಾಂಧಿಗೆ ಹೆಣ್ಣಿನ ಮೇಲೆ ಗೌರವ ಇತ್ತು. ಆಕೆಯ ಶಕ್ತಿಯ ಬಗ್ಗೆ ಅರಿವಿತ್ತು. ನಂಬಿಕೆಯಿತ್ತು. ಈ ಹೆಣ್ಣಿನ ಕುರಿತಾದ ದೃಷ್ಟಿಕೋನವು ಕರಾವಳಿಯ ಬದುಕಿನಲ್ಲಿ ಗಾಂಧಿ ಮೌಲ್ಯಗಳಿಂದ ವ್ಯತ್ಯಾಸ ಗೊಂಡಿದೆ.

ಗಾಂಧಿಯೆನ್ನುವ ಹೆಸರು ಸಾಮರಸ್ಯದ ಸಂಕೇತವಾಗಿ ಕಾಣಿಸಿದೆ. ಕಾದಂಬರಿಯ ಘಟನೆಗಳ ನೆಲೆಯಲ್ಲಿ ವಿಶ್ಲೇಷಿಸಿದಾಗ ಗಾಂಧಿಯನ್ನು ಕಾಣಲು ಉಡುಪಿ, ಬಂಟ್ವಾಳ, ಮುಲ್ಕಿ, ಕಾರ್ಕಳ, ಕುಂದಾಪುರ, ಪುತ್ತೂರು ಕಾಸರಗೋಡಿನ ಜನರು ಒಂದುಗೂಡುತ್ತಾರೆ. ಈ ಮೂಲಕ ಬಲವಾದ ಒಂದು ಶ್ರಮ ಸಂಸ್ಕೃತಿಯ ಜನರ ಸಮೂಹ ರಚನೆಯಾದವು. ಗಾಂಧಿ ಬರುವ ಹಿನ್ನಲೆಯು ಜಾತಿಗಳನ್ನು ಒಂದು ಮಾಡಿತು. ಹಿಂದೆ ಜಾತಿಯ ನೆಲೆಯಿಂದ ಸಮಾಜದ ಮುಖ್ಯ ವಾಹಿನಿಗೆ ಬಾರದ ವ್ಯಕ್ತಿಗಳಿಗೆ ಇಲ್ಲಿ ಪ್ರವೇಶ ಸಿಗುತ್ತದೆ. ಮಾತುಗಳನ್ನು ಕಳೆದುಕೊಂಡ ಕೊರಗರಂಥ ದಲಿತರು ಮಾತನಾಡುತ್ತಾರೆ. ಒಟ್ಟಿಗೆ ಕುಳಿತು ನದಿದಾಟುವ, ಸಹಪಂಕ್ತಿಯಲ್ಲಿ ಊಟ ಮಾಡುವ ಅವಕಾಶ ದೊರೆಯುತ್ತದೆ. ನಿತ್ಯದ ಒಡೆಯನ ಕೆಲಸವನ್ನು ಬದಿಗೊತ್ತಿ ಗಾಂಧಿಯನ್ನು ಕಾಣುವ ತವಕ ಹೆಚ್ಚುತ್ತದೆ. ಒಟ್ಟಿಗೆ ಕೆಲಸ ಮಾಡುವ, ಸ್ಪರ್ಶಿಸುವ, ಕೊಂಡು ಕೊಳ್ಳುವಿಕೆಯ ವ್ಯವಹಾರ ದೊರೆಯುತ್ತದೆ. ನಗುವನ್ನು ಕಳೆದುಕೊಂಡವರ ಮುಖದಲ್ಲಿ ನಿಷ್ಕಲ್ಮಶ ನಗು ಹುಟ್ಟುತ್ತದೆ. ಬದುಕುವ ಆಸೆ ಚಿಗುರುತ್ತದೆ. ಕಾದಂಬರಿಯಲ್ಲಿ ಒಂದಾಗಿ ವ್ಯವಹರಿಸುತ್ತಿದ್ದ ಬ್ರಾಹ್ಮಣರು, ಬಂಟರ ಜೀವನ ಕ್ರಮ, ಸಂಬಂಧಗಳಲ್ಲಿ ಏರು-ಪೇರಾಗುವುದು ಮಹತ್ವದ ವಿಚಾರ. ಇದು ಜಾತಿ ಸಂಬಂಧಗಳಲ್ಲಿ ಮಹತ್ವದ ಬದಲಾವಣೆಗೆ ಕಾರಣವಾಯಿತು. ಬಂಟರು ದುಡಿಯುವ ವರ್ಗದ ಜನರಿಗೆ ಸಹಾಯ ಮಾಡುತ್ತಾರೆ. ಹೆಬ್ಬಾರರಿಗೆ ಕೃಷಿ ಕಾರ್ಮಿಕರ ಅಭಾವ ಕಾಣಿಸುತ್ತದೆ. ಹೆಬ್ಬಾರರು ಆಳು ಮಕ್ಕಳೊಂದಿಗೆ ಅತಿಯಾದ ನಿಷ್ಠುರದಿಂದ ನಡೆದುಕೊಳ್ಳುವುದನ್ನು ಈ ಮೂಲಕ ತಿಳಿಸುತ್ತಾರೆ. ಆಧುನಿಕ ಜಗತ್ತಿನಲ್ಲಿ ಕೊರಗರಿಗೆ ಜಗುಲಿಯ ಒಳಗಡೆ ಬರುವ ಅವಕಾಶ ಸಿಗುತ್ತದೆ. ಸ್ತ್ರೀ ಪುರುಷ ರೆನ್ನುವ ಬೇಧ ಇಲ್ಲಿ ಗೌಣವಾಗಿದೆ. ಕೊರಗರ ಹಸಿವಿನ ಪ್ರಪಂಚದಲ್ಲಿ ಎಲ್ಲರೊಂದಿಗೆ ಊಟ ಮಾಡುವ ಅವಕಾಶಗಳಿರಲಿಲ್ಲ. ಕಂಬಳದ ಊಟದಲ್ಲಿ, ಯಾವುದೇ ಸಾಂಸ್ಕೃತಿಕ ಸಂದರ್ಭಗಳ ಊಟದಲ್ಲಿ ಮೊದಲ ಆದ್ಯತೆ ಬ್ರಾಹ್ಮಣರಿಗೆ; ನಂತರ ಶೂದ್ರರಿಗೆ ದೊರೆಯುತ್ತಿತ್ತು. ಕಂಬಳ ಗದ್ದೆಯಲ್ಲಿ ಪ್ರಾಣಿಗಳೊಂದಿಗೆ ಪ್ರಾಣಿಗಳಂತೆ ಓಡುವ ಸ್ಥಿತಿ, ತಾವೇ ಕೋಣಗಳಾಗಿ ಪರಿವರ್ತನೆಯಾಗುವುದು ಮನುಷ್ಯ ಸಂಬಂಧಗಳಲ್ಲಿ ಶೂನ್ಯವಾದ ಕೊರಗರ ಜೀವನ ಕ್ರಮವನ್ನು ತಿಳಿಸುತ್ತದೆ. ಗಾಂಧಿಯನ್ನು

ಎದುರುಗೊಳ್ಳಲು ಅಸ್ಪೃಶ್ಯರು ನದಿದಾಟಿ ಹೋಗುವ ಪ್ರಸಂಗ ಕಾದಂಬರಿಯಲ್ಲಿದೆ. ಆಗ ವರ್ಣವರ್ಗದ ನೆಲೆಯಿಂದ ಜಟಕಾದಲ್ಲಿ ಕೊರಗರನ್ನು ಕರೆದೊಯ್ಯುವುದಿಲ್ಲ. ಇದು ಅವಕಾಶ ವಂಚಿತವಾದ ಶೂದ್ರ ಜಗತ್ತನ್ನು ಪರಿಚಯಿಸುತ್ತದೆ. ಇನ್ನು ಉಳಿದಿರುವ ಜಾತಿಪ್ರಜ್ಞೆಯ ಪ್ರತೀಕವಾಗಿದೆ.

ಆದರೆ ಈ ಎಲ್ಲಾ ಬದಲಾವಣೆಗಳಾದರೂ ಕೆಲವು ಋಣಾತ್ಮಕ ಬದಲಾವಣೆಗಳನ್ನು ಗುರುತಿಸಬಹುದಾದರೂ ಇಂದು ತುಳುನಾಡಿನ ಬದಲಾವಣೆಯ ರೂಪಕವಾಗಿ ಗಾಂಧಿಯ ತತ್ವ ಉಳಿದಿಲ್ಲ. ಅಹಿಂಸೆಯನ್ನು ಹಿಂಸೆ ಆಕ್ರಮಿಸಿದೆ. ಧರ್ಮದ ನಡುವೆ ಕೋಮುದಳ್ಳುರಿಗಳು ಹುಟ್ಟಿಕೊಂಡಿವೆ. ತುಳುನಾಡಿನಲ್ಲಿ ಕೊಲೆ –ಸುಲಿಗೆ – ನರಹತ್ಯೆಯು ನಡೆದು ಹೋಯಿತು. ರಾಜಕೀಯ ಪಕ್ಷಗಳಲ್ಲಿ ಅರಾಜಕತೆ ಉಂಟಾಗಿದೆ. ತುಳು ನಾಡು ಮತಾಂಧತೆಯಲ್ಲಿ ಘರ್ಷಣೆಯನ್ನು ಅನುಭವಿಸುತ್ತಾ ಜನರು ಅನಿವಾರ್ಯವಾಗಿ ಪೇಟೆಗೆ ಬರುತ್ತಿದ್ದಾರೆ. ಪ್ರಕೃತಿಯ ಮೇಲೆ ಅಧಿಕಾರ ಚಲಾಯಿಸಬಾರದೆಂಬ ಗಾಂಧಿಯ ಚಿಂತನೆಗೆ ವಿರುದ್ಧವಾಗಿ ತುಳುನಾಡಿನಲ್ಲಿ ಬೃಹತ್ ಕೈಗಾರಿಕೆಗಳು ಸ್ಥಾಪನೆಯಾಗುವ ಎಲ್ಲಾ ಮುನ್ಸೂಚನೆಗಳಿವೆ.

1. <u>ಜಾತಿ ಸ್ವರೂಪದಲ್ಲಾದ ಬದಲಾವಣೆ:</u>

ಜಾತಿ ಪದ್ಧತಿಯು ಅವಹೇಳನಾಸ್ಪದವಾದ ಮತ್ತು ಕಳಂಕ ಪೂರ್ಣವಾದ ಅಭಿವ್ಯಕ್ತಿಯಾಗಿ ತುಳುನಾಡಿನಲ್ಲಿ ಚಲನಶೀಲವಾಗಿತ್ತು. ಅಸ್ಪೃಶ್ಯತೆಯ ನಿವಾರಣೆಯೆಂಬುದು ಕಾನೂನು–ಶಾಸನಗಳ ಪ್ರಶ್ನೆಯಲ್ಲ. ಇದು ಆತ್ಮ ಶೋಧನೆಯ ಪ್ರಶ್ನೆ. ಅಸ್ಪ್ರಶ್ಯರೆಂದು ತುಳಿತಕ್ಕೆ ಒಳಗಾದ ಜನರ ಕಲ್ಯಾಣವನ್ನು ಬಯಸಿ ಗಾಂಧಿ ಅವರನ್ನು ದೇವರ ಮಕ್ಕಳು ಎಂಬ ಅರ್ಥ ಬರುವಂತೆ ಹರಿಜನರೆಂದು ಕರೆದರು. ದಲಿತರು ಕಷ್ಟಪಟ್ಟು ದುಡಿಯುವವರು. ಆದರೆ ಸಮಾಜದ ಸವಲತ್ತುಗಳಿಂದ ವಂಚಿತರಾದವರು. ಹಲವು ಬಗೆಯ ಕೆಲಸವನ್ನು ಮಾಡುವ ನಿಮ್ನ ವರ್ಗದವರ ಬದುಕು ಈ ಕಾದಂಬರಿ ಪ್ರಪಂಚದೊಳಗೆ ಅನಾವರಣಗೊಂಡಿದೆ. ಹೀಗೆ ದಲಿತರಿಗೆ ಪ್ರಾಥಮಿಕ ಅವಶ್ಯಕತೆಗಳು ಸಿಗದ ಸಮಾಜವು ಅವರ ಮುಂದಿತ್ತು. ದು:ಖ ಅಸಹಾಯಕತೆಯನ್ನು ಒಡಲಲ್ಲಿ ಇಟ್ಟು ಕೊಂಡ ಸ್ಥಿತಿ ಇವರ ಬದುಕು. ಸಾವಿನ ಮನೆಯ ದುಃಖದ ವಾರ್ತೆಯನ್ನು ಕೊರಗರು ಡೋಲು ಹೊಡೆಯುವುದರ ಮೂಲಕ ಊರಿಗೆ ತಿಳಿಸಲಾಗುತ್ತಿತ್ತು. ಇದನ್ನು ಕೇಳಿದ ಎಲ್ಲಾ ಜಾತಿ ಜನಾಂಗದವರು ಸಾವಿನ ಮನೆಗೆ ಬಂದು ಸೇರುತ್ತಿದ್ದರು. ಕಂಬಳದ ಆಚರಣೆಯಲ್ಲೂ ಡೋಲಿನ ಮೂಲಕವೇ ಕೊರಗರು ಮೇಲ್ಜಾತಿಯವರ ಮನೆಗೆ ತಿಳಿಸಿ ಬರುತ್ತಿದ್ದರು. ಈ ಕೆಲಸವನ್ನು ಹೆಬ್ಬಾರರು ಕೊರಗರಿಗೆ ಮಾಡಲು ಆಜ್ಞಾಪಿಸುತ್ತಿದ್ದರು.

ಶ್ರೀಮಂತರಿಗೆ, ಮೇಲ್ಜಾತಿಯವರ ಅಗತ್ಯಗನುಗುಣವಾಗಿ ಬದುಕು ರೂಪೀಕರಣಗೊಂಡಿತ್ತು. ಇಂತಹ ಕಾಲಘಟ್ಟದಲ್ಲಿ ಶೋಷಣೆಯಿಂದ ದುಡಿಯುವ ಜನರಿಗೆ ಬಿಡಿಸಿಕೊಳ್ಳಬೇಕಾಗಿತ್ತು. ಸಮಾಜದಲ್ಲಿ ಅಂತರ ಹೆಚ್ಚಿದಂತೆ ಜಾತಿವರ್ಗ ಸಂಘರ್ಷಗಳಿಗೆ ಕಾರಣವಾಯಿತು. ಕಾದಂಬರಿಯೊಳಗೆ ಪ್ರಮುಖವಾಗಿ ಬ್ರಾಹ್ಮಣ, ಬಂಟ, ಮುಸ್ಲಿಂ, ಕೊರಗರು ಜಾತಿಗಳು ಜಾತಿ ಸಂಘರ್ಷದ ಪ್ರತಿನಿಧಿಗಳಾಗಿ ಕಾಣಿಸಿಕೊಳ್ಳುತ್ತಾರೆ.

ಒಂದು ಕಾಲದಲ್ಲಿ ಸಾಮರಸ್ಯದಿಂದಿದ್ದ ಬ್ರಾಹ್ಮಣರು ಮತ್ತು ಬಂಟರ ಮಧ್ಯೆ ಸಂಘರ್ಷ ಉಂಟಾಯಿತು. ಜಾತಿಯ ನೆಲೆಯಲ್ಲಿ ಶೋಷಣೆಗೆ ಕಾರಣರಾಗಿದ್ದ ಮೇಲ್ಜಾತಿಯ ಬಂಟರು ಬ್ರಾಹ್ಮಣರ ವಿರುದ್ಧ ನಿಲ್ಲುತ್ತಾರೆ. ಅವರು ದುಡಿಯುವ ವರ್ಗದ ಹಿತಾಸಕ್ತಿಗೆ ಬ್ರಾಹ್ಮಣರ ಪರವಾಗಿದ್ದು ಬಂಟರ ಹಣಬಲವು ಜಾತಿ ಸ್ವರೂಪದಲ್ಲಿ ಬದಲಾವಣೆ ಮಾಡಿಸುತ್ತದೆ. ಕೊರಗರು ಮುಖ್ಯ ವಾಹಿನಿಗೆ ಬರುವ ಮುನ್ಸೂಚನೆ ಕಾಣಿಸುತ್ತದೆ. ಕೊರಗರ ಅಂತಪ್ಪ, ಐತು ಮೊದಲಾದ ಶ್ರಮಿಕವರ್ಗದವರು ಗಾಂಧಿ ಮೌಲ್ಯಗಳ ಸತ್ಯವನ್ನು ಮನಗಾಣುತ್ತಾರೆ. ಒಡೆಯಾದ ಹೆಬ್ಬಾರರನ್ನು ತುಂಬಾ ನಯವಾಗಿ ವಿರೋಧಿಸುತ್ತಾರೆ. ಗಾಂಧಿಯ ಬಗ್ಗೆ ತಿಳಿಸಿ ಹೇಳುವ ಗಾಂಧಿವಾದಿಗಳಾದ ಮಾರಪ್ಪ ತಿಂಗಳರಾಯರ ಪ್ರತಿಭಟನೆಗಳನ್ನು ಇವರು ಗಮನಿಸುತ್ತಾರೆ. ಶೋಷಕರಿಗೆ ಹೋರಾಟದ ಬಿಸಿ ಮುಟ್ಟುತ್ತದೆ.

ಜಾತಿಯಲ್ಲಿ ಕೊರಗರ ಸ್ಥಾನವನ್ನು ನಿರ್ಧರಿಸಲು ಕಂಬಳದ ಬಗ್ಗೆ ವಿಶ್ಲೇಷಣೆ ಮಾಡುವುದು ಅಗತ್ಯವಾಗಿದೆ. ಕಾದಂಬರಿಯು ಕಂಬಳದಿಂದ ಪ್ರಾರಂಭವಾಗುತ್ತದೆ. ಇದು ಕರಾವಳಿಯಲ್ಲಿ ನಡೆಯುವ ಓಟದ ಕೋಣಗಳ ಸ್ಪರ್ಧೆಯಾಗಿದೆ. ಇದನ್ನು ಕಂಬಳ ಎಂದು ತುಳುನಾಡಿನವರು ಗುರುತಿಸುತ್ತಾರೆ. ಕುಂದಾಪುರದಿಂದ ಕಾಸರಗೋಡುವರೆಗಿನ ಪ್ರಾದೇಶಿಕ ಭಾಗದಲ್ಲಿ ಇದೊಂದು ಜನಪ್ರಿಯ ಕ್ರೀಡೆ. ದೀಪಾವಳಿಯ ನಂತರ ಪ್ರಾರಂಭವಾಗಿ ಶಿವರಾತ್ರಿಯ ಕಾಲಕ್ಕೆ ಮುಗಿಯುತ್ತದೆ. ಕಂಬಳದ ಕ್ರೀಡೆಯ ಹಿಂದೆ ಕೃಷಿಭೂಮಿಯನ್ನು ಉಳುವ, ಬಿತ್ತುವ ಬೃಹತ್ ಉದ್ದೇಶವೂ ಇತ್ತು. ಸುಮಾರು ಮುನ್ನೂರಕ್ಕೂ ಮಿಕ್ಕು ಕಂಬಳಗಳು ನಡೆಯುತ್ತವೆ. ಈ ಕಾದಂಬರಿಯಲ್ಲಿ ಮುಲ್ಕಿಯ ಅರಸು ಕಂಬಳವನ್ನು ಪ್ರಸ್ತಾಪಿಸಲಾಗಿದೆ. ಚಂದ್ರಕೆರೆಯ ಕಂಬಳವೆನ್ನುವುದು ಪ್ರಾರಂಭದಲ್ಲಿ ಸ್ಥಳವನ್ನು ನಂತರ ಕ್ರೀಡೆಯ ಹೆಸರನ್ನು ಸೂಚಿಸುತ್ತದೆ. ಕಂಬಳವನ್ನು ನಡೆಸುವ ಕುರಿತು ಊರಿನ ಹಿರಿಯರು ನಿರ್ಧರಿಸುತ್ತಾರೆ. ಕಂಬಳ ಗದ್ದೆಯು ಯಜಮಾನನ ಅಂಕೆಯಲ್ಲಿರುತ್ತದೆ. ಒಂದು ನಿರ್ದಿಷ್ಟ ದಿನ ಗೊತ್ತುಪಡಿಸಿ ಕಂಬಳ ಏರ್ಪಡಿಸುತ್ತಾರೆ.

ಇಲ್ಲಿ ಕಂಬಳದ ಗದ್ದೆಯು ಬ್ರಾಹ್ಮಣ ಹೆಬ್ಬಾರರಿಗೆ ಸೇರಿರುವುದು. ಕಂಬಳದ ಗದ್ದೆಯಲ್ಲಿ ಕೊರಗರ ಜೀವನ ತುಂಬಾ ನಿಕೃಷ್ಟವಾದುದು. ನಿಗದಿಯಾದ ಹಿಂದಿನ ದಿನ ಕೊರಗರು ಕಂಬಳದ ಸುದ್ದಿಯನ್ನು ಊರಿನ ಜನರಿಗೆ ಮುಟ್ಟಿಸುತ್ತಾರೆ. ಕೊರಗರು ಜಾತಿ ವ್ಯವಸ್ಥೆಯಲ್ಲಿ ಅಸ್ಪೃಶ್ಯರು. ಬಂಟರು,

ಬ್ರಾಹ್ಮಣರು ಇಲ್ಲಿ ಕಂಬಳದ ಮೇಲೆ ಅಧಿಪತ್ಯ ಹೊಂದಿದವರು. ಕೊರಗರ ಜನರಿಗೆ 'ಮುಕ್ರಿ'ಯಾಗಿ ಓರ್ವ ಕೊರಗ ನೇಮಿಸಲ್ಪಡುತ್ತಾನೆ.

ಕೊರಗರು ಕಂಬಳ ಗದ್ದೆಯಲ್ಲಿ **'ಉರಲ್'**[1] ಗಳನ್ನು ಹೇಳುತ್ತಿದ್ದರು. ರಾತ್ರಿಯಿಡಿ ಕೊರಗರು ಕಂಬಳಗದ್ದೆಯಲ್ಲಿ ಕುಣಿಯುವುದು ನಡೆಯುತ್ತಿತ್ತು. ಪ್ರಾಣಿರೂಪಕವಾಗಿ ಅವರ ಬದುಕು. ಕೊರಗರು ಎರಡು ಕೋಣಗಳಂತೆ ಮಂಡಿಯೂರಿ ನಿಲ್ಲಿತ್ತಾರೆ. ಇನ್ನೊಬ್ಬ ಕೊರಗ ಗಂಟಲಿಗೆ ಹಗ್ಗವನ್ನು ಕಟ್ಟಿ ಕೋಣ ಓಡಿಸುವ ಆಚರಣೆಯನ್ನು ಹಿಂದೆ ಆಚರಿಸುತ್ತಿದ್ದರು. ಹೀಗೆ ದಿನದ 24 ಘಂಟೆಗಳೂ ಕೊರಗರು ಕಂಬಳದ ಗದ್ದೆಯಲ್ಲಿ ಇರುತ್ತಿದ್ದರು. ಕೋಣಗಳಂತೆ ಅಭಿನಯಿಸಿ ಆದಮೇಲೆ **'ಪನಿಕುಲ್ಲುನೆ'**[2] ಕಾರ್ಯದಲ್ಲಿ ತೊಡಗುತ್ತಿದ್ದರು. ಕಂಬಳದ ಯಜಮಾನ ಇವರಿಗೆ ಗೌರವ ಸಲ್ಲಿಸುತ್ತಾನೆ. ಈ ಎಲ್ಲಾ ಸಂದರ್ಭದ ಸ್ವಾರಸ್ಯಗಳನ್ನು ಚಂದ್ರಕೆರೆ ಕಂಬಳದಲ್ಲಿ ಗಮನಿಸಬಹುದು. ಇಲ್ಲಿ ಅನೇಕ ಜಾತಿಯ ಜನರು ಸೇರುತ್ತಾರೆ. ಕಂಬಳದ ಕೋಣಗಳ ಕೋಡುಗಳಿಗೆ ಸುಣ್ಣದಲ್ಲಿ ಬಿಳಿಗೆರೆಗಳನ್ನು ಅಡ್ಡವಾಗಿ ಎಳೆಯುತ್ತಾರೆ. ಹೂವಿನಿಂದ ಅಲಂಕರಿಸುತ್ತಾರೆ. ಮಂತ್ರಿಸಿದ ನೂಲನ್ನು ಕಟ್ಟುತ್ತಾರೆ.

ಕೋಣಗಳು ಮತ್ತು ಕೊರಗರು ಪಾಲ್ಗೊಳ್ಳುವ ಆ ದಿನದ ಕಂಬಳದ ಆಚರಣೆಯಲ್ಲಿ ಮನೋರಂಜನೆ ಇದೆಯಾದರೂ ಕೋಣಗಳು ಮತ್ತು ಕೊರಗರು ಜೊತೆಜೊತೆಗೆ ಕಂಬಳದ ಆಚರಣೆಯಲ್ಲಿ ಬಳಸಿರುವುದು ಬದುಕುವ ಸಾಮಾಜಿಕ ರಚನೆಯು ಕೊರಗರ ಸ್ಥಾನಮಾನಕ್ಕೆ ಸಂಕೇತವಾಗಿದೆ. ಕಂಬಳ ಕ್ರೀಡೆ ಆಚರಣೆಯಾಗಿ ನಡೆಯುವ ಜೊತೆಗೆ ಕೊರಗರಿಂದ ಗದ್ದೆಯ ಕೆಲಸವನ್ನು ಮಾಡಿಸುತ್ತಿದ್ದರು. ಬಹುಜಾಣತನದಿಂದ ಈ ಕೆಲಸ ನಡೆಯುತ್ತದೆ. ಆ ದಿನ ವಿಶೇಷವಾಗಿ ಒಳ್ಳೆಯ ಊಟವನ್ನು ನೀಡುತ್ತಿದ್ದರು. ಹಸಿದ ಇವರಿಗೆ ತಿನ್ನಲು ಒಂದಿಷ್ಟು ಆಹಾರ ನೀಡಿದರೆ ಇವರು ವಿಧೇಯರಾಗುತ್ತಿದ್ದರು. ವಿಧೇಯರಾಗಿರುವುದೇ ತಮ್ಮ ಬದುಕು ಎಂದು ನಂಬಿದ್ದರು. ಈ ಕಾದಂಬರಿಯೊಳಗೆ ಅರಸು ಸ್ಥಾನ ಯಜಮಾನ್ಯದ ಸ್ಥಿತಿಯಿಂದ ಬಂದಿರುವಂತಹುದು. ಇವರು ಜೈನರು. ಜಮೀನು ಕಳೆದುಕೊಂಡರೂ, ಅರಸು ಎಂಬ ಹೆಗ್ಗಳಿಕೆ ಜಾತಿಯ ನೆಲೆಯಿಂದ ಹಾಗೆಯೇ ಉಳಿದುಕೊಂಡಿದೆ.

ತುಳುನಾಡ ದುಡಿಯುವ ವರ್ಗದಲ್ಲಿ ಹಸಿವಿನ ಸಂಸ್ಕೃತಿಯಿದೆ. ಜಾತಿಯ ನೆಲೆಯಿಂದ ಜೀತದಾಳು, ಕೂಲಿಯಾಳುಗಳಾಗಿ ಪರಿವರ್ತಿಸಿದ ಸಮಾಜದ ಸಮೂಹದಲ್ಲಿ ಇವರಿದ್ದಾರೆ. ಹಸಿವು ಲೌಕಿಕ ನೆಲೆಯ ಸಮಸ್ಯೆಯಾದರೆ, ಅಲೌಕಿಕ ನೆಲೆಯ ಮೌಢ್ಯ ಆಚಾರಗಳು ಜಾತಿಯಿಂದಲೇ ಹುಟ್ಟಿಕೊಂಡಿದೆ. 'ನಮ್ಮಲ್ಲಿ ಸಂಸ್ಕೃತಿಗಳಿವೆ' ಎಂಬ ರಹಮತ್ ತರೀಕೆರೆಯವರ ಮಾತು ಇಲ್ಲಿ ಗಮನಾರ್ಹವಾದುದು. ಒಡೆಯನನ್ನು ಒಪ್ಪಿಸಿ ಕೆಲಸ ಪ್ರಾರಂಭಿಸಿ, ಬಿಡಿಗಾಸುಗಳನ್ನು, ವಸ್ತುಗಳನ್ನು ಪಡೆಯುವ ದಲಿತರ ಆಲೋಚನೆ ಇಲ್ಲಿ ಬದಲಾಯಿತು. ಅನ್ನದೇವರ ಮುಂದೆ ಇನ್ನು ದೇವರಿಲ್ಲವೆಂಬ

ಹಂತಕ್ಕೆ ಬಂದರು. ಗಾಂಧಿ ಮೂರನೇ ಬಾರಿ ತುಳುನಾಡಿಗೆ ಬರುವಾಗ ಹೆಬ್ಬಾರರ ಗದ್ದೆಯಲ್ಲಿ ನಡೆಯುವ ಕಂಬಳದ ಆಚರಣೆಯಲ್ಲಿ ಪಾಲ್ಗೊಳ್ಳುವುದಿಲ್ಲ. ಈ ಮೂಲಕ ಒಂದು ಅರಿವಿನ ಜಗತ್ತಿನೊಂದಿಗೆ ಜಾತಿ ವ್ಯವಸ್ಥೆಯಲ್ಲಿ ಸಾಕಷ್ಟು ಬದಲಾವಣೆಗಳು ಕಾದಂಬರಿಯೊಳಗೆ ನಡೆಯಿತು.

ಕೊರಗರು ಕಂಬಳವನ್ನು ತಿರಸ್ಕರಿಸುವ ಮೂಲಕ ಶ್ರೇಣಿಕೃತ ವ್ಯವಸ್ಥೆಯಲ್ಲಿ ಪ್ರಶ್ನಿಸುವುದನ್ನು ಇಲ್ಲಿ ಗುರುತಿಸಬಹುದು. ಹಾಗೆಯೇ ದ್ರೌಪದಿ ಬ್ಯಾರ್ದಿಯಾಗಿ ( ಮುಸ್ಲಿಂಳಾಗಿ) ಬದಲಾಗುವುದು ಧರ್ಮದೊಳಗಿನ ಸಂಘರ್ಷದ ಪ್ರತೀಕವಾಗಿದೆ.

## 2. <u>ಧರ್ಮದ ಸ್ವರೂಪದಲ್ಲಾದ ಬದಲಾವಣೆ:</u>

ಕಾದಂಬರಿಯೊಳಗೆ ಹಿಂದೂ ಮತ್ತು ಮುಸ್ಲಿಂ ಧರ್ಮಗಳ ನಡುವಿನ ಸಂಘರ್ಷವಿದೆ. ತುಳುನಾಡಿನಲ್ಲಿ ಮುಸ್ಲಿಂ ಧರ್ಮ ಬೀರಿದ ಪ್ರಭಾವವನ್ನು ಸಾಂಕೇತಿಕವಾಗಿ ತಿಳಿಸಲಾಗಿದೆ. ಸನಾತನ ಸಂಸ್ಕೃತಿಯ ಆಚಾರ-ವಿಚಾರಗಳ ಮೌಢ್ಯಗಳನ್ನು ಗಾಂಧಿಯ ಮೌಲ್ಯ ಸಿದ್ಧಾಂತ ಒಡೆಯುತ್ತದೆ. ಧರ್ಮ ಒಡೆದು ಆಳುವ ಸಂದರ್ಭವನ್ನು ಕಟ್ಟಿಕೊಟ್ಟಿದೆ. ಧರ್ಮದೊಳಗೆ ಖಾಸಗಿ ಆಲೋಚನೆ ಪ್ರವೇಶವಾದಾಗ ಮನುಷ್ಯತ್ವ ಸೋಲುವುದನ್ನು ಗುರುತಿಸಲು ಸಾಧ್ಯವಾಯಿತು. ಧರ್ಮದ ಕಟ್ಟುಪಾಡಿನಲ್ಲಿ ಹೆಂಡತಿ ಮಕ್ಕಳನ್ನು ಬಂಧಿಸಿದ ಹೆಬ್ಬಾರರು ಸ್ವತ: ಅದೇ ಧರ್ಮದ ಒಳಗಡೆ ಧರ್ಮದ ಕಟ್ಟು ಪಾಡನ್ನು ಈ ರೀತಿಯಲ್ಲಿ ಮುರಿಯುತ್ತಾರೆ. ತನ್ನ ಸ್ನೇಹಿತನಾದ ನಾರಾಯಣ್ಣಪ್ಪನ ಮಡದಿ ಪುಟ್ಟಮ್ಮಕ್ಕಳೊಂದಿಗೆ ಸ್ನೇಹ ಬೆಳೆಸುತ್ತಾರೆ. ತನ್ನ ಮನಸ್ಸಿನ ತೃಷೆಗೆ ಹೆಬ್ಬಾರರು ಧಾರ್ಮಿಕತೆಯನ್ನುಮುರಿದು ಈಕೆಯೊಂದಿಗೆ ದೇಹ ಸಂಬಂಧವನ್ನು ಇಟ್ಟುಕೊಳ್ಳುತ್ತಾರೆ. ಇದು ಧಾರ್ಮಿಕ ಡಂಬಾಚಾರದ ಬಹುಮುಖ. ಹಿಂದೂ ಧರ್ಮದಲ್ಲಿ ವರ್ಗರಚನೆಯನ್ನು ಧರ್ಮ ನಿರ್ಧರಿಸಿದೆ. ಧರ್ಮವು ಒಡೆದು ಆಳುವ ತಂತ್ರವನ್ನು ರೂಪಿಸಿತು. ಆಗ ಇಲ್ಲಿ, ಜೀವನಮೌಲ್ಯ ಪಾಲನೆ, ಪೋಷಣೆ, ರಕ್ಷಣೆಯೆಂಬ ನಿಜವಾದ ಧರ್ಮ ಮನುಷ್ಯತ್ವವನ್ನು ಅರ್ಥ ಮಡಿಕೊಂಡು ನಡೆಯುವುದು. ತಾಯಿ, ತಂದೆಯಾಗಿ ರುಕುಣಿಯಮ್ಮ ಹೆಬ್ಬಾರರು ಮಗಳಾದ ದ್ರೌಪದಿಯ ಆಸೆಯನ್ನು ಅರ್ಥ ಮಾಡಿಕೊಳ್ಳುವುದಿಲ್ಲ. ದ್ರೌಪದಿಯ ಗಂಡ ಅದ್ರಾಮನ ತಂದೆ ಮ್ಯೊದಿನ್ ಬ್ಯಾರಿಗೆ ಮಸೀದಿಯ ಧರ್ಮದ ಭಯವೇ ಮುಖ್ಯವಾಗುತ್ತದೆ. ಕಿರಿಯರಿಗೆ ತಿಳಿಸಬೇಕಾದ ಅರಿವಿನ ನೆಲೆಗಳು ಇಲ್ಲಿ ಇಲ್ಲ. ಧರ್ಮವನ್ನು ಸ್ವಹಿತಗಳಿಗೆ ಬಳಸಿದಾಗ ಧರ್ಮದ ಸ್ಥಳದಲ್ಲಿ ಭಯ ಅಭದ್ರತೆ ಹುಟ್ಟುತ್ತದೆ. ಇದನ್ನೆಲ್ಲಾ ಹೆಬ್ಬಾರರು ಮತ್ತು ಮ್ಯೊದಿನ ಬ್ಯಾರಿಯ ಪಾತ್ರಗಳಿಂದ ತಿಳಿಯಬಹುದು.

ಅದ್ರಾಮನ ಮದುವೆಯ ಸನ್ನಿವೇಶ ಕಾದಂಬರಿಯಲ್ಲಿದೆ. ಬ್ರಾಹ್ಮಣ ಹುಡುಗಿಯನ್ನು ಮುಸ್ಲಿಂ ಹುಡುಗ ಮದುವೆಯಾದಾಗ ಅನೇಕ ವ್ಯತ್ಯಾಸಗಳು ನಡೆಯುತ್ತವೆ. ಅದು ಊಟ, ಆಹಾರ, ವಸ್ತ್ರ,ಆಚರಣೆಗಳಲ್ಲಿ. ಅದ್ರಾಮನು ದ್ರೌಪದಿಯನ್ನು ಮದುವೆಯಾದಾಗ ಮಾಂಸಾಹಾರವನ್ನು

ನಿಷೇಧಗೊಳಿಸಲಿಲ್ಲ. ಈಕೆಯು ಮಾಂಸಹಾರವನ್ನು ಸೇವಿಸದಿದ್ದರೂ ಅವನ ಜೊತೆಯಾಗಿಯೇ ಊಟ ಮಾಡುತ್ತಿದ್ದಳು. ಎರಡು ಧರ್ಮದ ಆಚರಣೆಯನ್ನು ಇವರಿಬ್ಬರೂ ಒಪ್ಪಿಕೊಂಡರೂ, ಊರವರ ಮುಂದೆ ದ್ರೌಪದಿಯು ದೋಪು ಬ್ಯಾರ್ದಿಯಾಗಿ ಬದಲಾವಣೆಯಾಗುತ್ತಾಳೆ. ವ್ಯೊಯ್ದಿನ್‌ಬ್ಯಾರಿಗೆ ಮಗ ಆದ್ರಾಮನು ವಿಧವೆ ದ್ರೌಪದಿಯನ್ನು ಮದುವೆಯಾಗಿರುವುದು ಅಕ್ಷಮ್ಯ ಅಪರಾಧವಾಗಿ ಕಾಣುತ್ತದೆ.

ಈ ಧರ್ಮದ ಎಲ್ಲಾ ಆಚರಣೆಗಳನ್ನು ವಿಸ್ತಾರವಾಗಿ ಮದುವೆಯ ಸಂದರ್ಭವು ಮನವರಿಕೆ ಮಾಡುತ್ತದೆ. ಇಲ್ಲಿ ಹಿಂದೂ ಆಚರಣೆಗಳ ವಿಡಂಬನೆಯಂತೆ ಮುಸ್ಲಿಂ ಧರ್ಮಾಂಧ ಮನಸ್ಥಿತಿಯ ವಿಶ್ಲೇಷಣೆಯಿದೆ. ಆದರೆ ಇದು ಧಾರ್ಮಿಕ ಸ್ವರೂಪದಲ್ಲಿ ಬದಲಾವಣೆಗೆ ಕಾರಣವಾಗುತ್ತದೆ. ಹಿಂದೂ–ಮುಸ್ಲಿಂ ಸಾಮರಸ್ಯಕ್ಕೆ ಪರೋಕ್ಷವಾಗಿ ಕಾರಣವಾಗುತ್ತದೆ.

### 4. ವಿವಾಹ ಸ್ವರೂಪದಲ್ಲಾದ ಬದಲಾವಣೆ:

ಕಾದಂಬರಿಯ ಬಹುಮುಖ್ಯ ಭಾಗವಾಗಿ ಮದುವೆ ಕಾಣಿಸಿಕೊಂಡಿದೆ. ನಾಗರಿಕತೆ ಬೆಳೆದಂತೆ ಮದುವೆ ಹೆಚ್ಚು ಪರಿಷ್ಕಾರಗೊಳ್ಳುತ್ತಾ ಬಂತು. 'ಒಂದು ಗಂಡಿಗೆ ಒಂದು ಹೆಣ್ಣು, ಒಂದು ಹೆಣ್ಣಿಗೆ ಒಂದು ಗಂಡು' ಎಂಬ ನಿಯಮದಲ್ಲಿ, ದೈಹಿಕ ಮತ್ತು ಮಾನಸಿಕವಾಗಿ ಜೊತೆಯಲ್ಲಿ ಬಾಳುವುದೇ ವಿವಾಹವಾಯಿತು. ಸಮಾಜಶಾಸ್ತ್ರಜ್ಞ ರಾಬರ್ಟ್ ಹೆಚ್.ತಾವಿ ಹೇಳುವಂತೆ "ಅನುಮತಿ ನೀಡಬಹುದಾದ ಸಂಗಾತಿಗಳ ನಡುವಿನ ಶಾಶ್ವತ ಸಂಯೋಗವೇ ವಿವಾಹ" ವೆನಿಸಿಕೊಂಡಿದೆ. ವೈವಾಹಿಕ ಜೀವನಕ್ಕೆ ಸಮಾಜ ಕೊಡುವ ಒಪ್ಪಿಗೆಯ ಪ್ರಮಾಣಪತ್ರವೇ ವಿವಾಹ. ವಂಶ ಪಾವಿತ್ರ್ಯ, ಸಂತಾನ ರಕ್ಷಣೆ, ಪೋಷಣೆ ಮದುವೆಯ ಭಾಗವಾಗಿ ಮುಂದುವರಿಯಿತು. ಹಿಂದು ವಿವಾಹದಲ್ಲಿ ವಾಗ್ದಾನ, ಕನ್ಯಾದಾನ, ಹೋಮ, ಪಾಣಿಗ್ರಹಣ, ಮಾಂಗಲ್ಯಧಾರಣ ಮತ್ತು ಸಪ್ತಪದಿಗಳೆಂಬ ವಿಧಿಗಳಿವೆ. ಮುಸ್ಲಿಂ ವಿವಾಹವು ಧರ್ಮಸಮ್ಮತವಾದದು. ನ್ಯಾಯವಾದ ರೀತಿಯಲ್ಲಿ ಮಕ್ಕಳನ್ನು ಪಡೆಯುವುದು ವಿವಾಹದ ಉದ್ದೇಶಗಳಲ್ಲಿ ಒಂದು. ಖುರಾನಿನ ಪ್ರಕಾರ ಸ್ವಸ್ಥ ಮನಸ್ಸು, ಶರೀರದ ವ್ಯಕ್ತಿಗಳು ಮಾತ್ರ ವಿವಾಹವಾಗ ಬಹುದು.

ತುಳುನಾಡ ಸಂಸ್ಕೃತಿಯಲ್ಲಿ ಬ್ರಾಹ್ಮಣರಲ್ಲಿ ಬಾಲ್ಯವಿವಾಹ, ವಿಧವೆತನ, ಕೇಶಮುಂಡನ ಇದ್ದಿತೆಂಬುದನ್ನು ಕಾದಂಬರಿ ನಿರೂಪಿಸುತ್ತದೆ. ವಿವಾಹವು ಕುಟುಂಬ ವ್ಯವಸ್ಥೆಯ ಆಧಾರವಾಗಿ ಕಾದಂಬರಿಯಲ್ಲಿ ಕಾಣಿಸಿಕೊಂಡಿದೆ. ಎಂಟು ವಿಧದ ವಿವಾಹಗಳು ಪ್ರಚಲಿತವಿದ್ದರೂ ಹಿರಿಯರು ಗೊತ್ತುಪಡಿಸಿದ ವಿವಾಹವೇ ಶ್ರೇಷ್ಠ ಎಂಬ ಸಾಮಾಜಿಕ ಕಲ್ಪನೆ ಇದೆ. ಕ್ರಿ.ಶ.ಕದ ನಂತರ ಅನೇಕ ಸ್ಥಿತ್ಯಂತರಗಳು ಸಾಮಾಜಿಕ ರಾಜಕೀಯ ಕ್ಷೇತ್ರಗಳಲ್ಲಿ ನಡೆಯಿತು. ಬಾಲ್ಯವಿವಾಹ, ಸಹಗಮನಗಳು ಸುಮಾರು ಕಾಲದವರೆಗೆ ಉಳಿದವು. ಹಿಂದಿನ ಕಾಲದಲ್ಲಿ ಜಾತಕ ಪರೀಕ್ಷಿಸುವ ಎಡೆಬಿಡಂಗಿತನ ಹೆಣ್ಣು

ಹೆತ್ತವರಲ್ಲಿ ಹೆಚ್ಚಾಗಿತ್ತು. ವಿವಾಹವು ಗಂಡು ಹೆಣ್ಣಿನ ದೈಹಿಕ ಮತ್ತು ಮಾನಸಿಕ ಬೇಡಿಕಗಳ ಪೂರೈಕೆಗೆ ಅತೀ ಅಗತ್ಯ. ಬಾಲ್ಯ ವಿವಾಹ, ಕೇಶಮುಂಡನಗಳಿಗೆ ತುಳುನಾಡಲ್ಲಿ ಧರ್ಮದ ಭೀತಿಯೇ ಕಾರಣವಾಗಿದೆ. ದ್ರೌಪದಿಯು ಬಾಲ ವಿಧವೆಯಾದಾಗ ಆಕೆಯ ತಂದೆಯಾದ ಹೆಬ್ಬಾರರು ಈಕೆಯನ್ನು ಕೇಶ ಮುಂಡನ ಮಾಡಿಸುತ್ತಾರೆ. ಹೆಬ್ಬಾರರಿಗೆ ಧರ್ಮ ಹಾಗೂ ಸಮಾಜದ ಭೀತಿಯಿತ್ತು. ಅವರು ಮಗಳನ್ನು ಧರ್ಮದ ನಿಷ್ಠುರ ನಿಯಮಗಳನ್ನು ಪಾಲಿಸಲು ಬಳಸಿಕೊಂಡರು. ಆದರೆ ಬ್ರಾಹ್ಮಣೇತರರಲ್ಲಿ ಈ ಪದ್ಧತಿಯಿಲ್ಲ. ವಿಧವಾ ವಿವಾಹ ನಿಯಮ ಬಾಹಿರವಲ್ಲ. ಬ್ರಾಹ್ಮಣ

ಸಮಾಜದಲ್ಲಿ ಮಾತ್ರ ಈ ಪದ್ಧತಿ ಇತ್ತು ಎಂಬುದನ್ನು ಕಾದಂಬರಿ ಉಲ್ಲೇಖಿಸುತ್ತದೆ. ಮದುವೆಯು ಸ್ವರ್ಗದಲ್ಲಿ ನಡೆಯುತ್ತದೆಯೆಂದು ಹಿಂದಿನವರು ನಂಬಿದ್ದರು. ಇದಕ್ಕೆ ಶೀಲ ಚಾರಿತ್ರ್ಯಗಳ ಗಂಟನ್ನು ಸಮಾಜ ಹೇರಿತ್ತು. ಇಲ್ಲಿ ಗುದ್ದಾಡಿ ಗೆದ್ದವರು, ಪಳಗಿದವರು ಇದ್ದಾರೆ. ದ್ರೌಪದಿಯು ಜೀವನದಲ್ಲಿ ಒಂದು ಸಲ ಮದುವೆಯಾಗಿ ಬಾಲವಿಧವೆಯಾಗಿದ್ದಳು. ಅದ್ರಾಮನು ವಿಧವೆ ದ್ರೌಪದಿಯರು ಮದುವೆಯಾಗುವುದರ ಮೂಲಕ ಸ್ವರ್ಗದ ಕಲ್ಪನೆಯನ್ನು ಒಡೆಯುತ್ತಾರೆ. ನೆಲದ ಬದುಕನ್ನು ಕಾಣುತ್ತಾರೆ. ಇಂತಹ ಸ್ಥಗಿತ ನಂಬಿಕೆ ಇದ್ದವು ಎಂಬುದನ್ನು ತುಳುನಾಡ ಜೀವನ ರೀತಿಯೊಂದಿಗೆ 'ಗಾಂಧಿ ಬಂದ' ಕಾದಂಬರಿ ತಿಳಿಸುತ್ತದೆ.

ಕಾದಂಬರಿಯಲ್ಲಿ ದ್ರೌಪದಿಯು ವಿಧವೆ ಹೆಣ್ಣಾಗಿ ಚಿತ್ರಿತವಾಗಿದ್ದಾಳೆ. ಹೆಂಡತಿಯನ್ನು ಕಳೆದುಕೊಂಡವನು ವಿಧುರನಾಗುತ್ತಾನೆ. ಪ್ರಮುಖ ಪಾತ್ರವಾಗಿ ಕಾಣಿಸಿಕೊಂಡ ದ್ರೌಪದಿ ಬಾಲವಿಧವೆ. ಬಾಲ್ಯದಿಂದ ಹೆಣ್ಣಿಗೆ ಬಳೆ, ಕುಂಕುಮ, ಹೂಗಳನ್ನು ಕೊಟ್ಟು ಆಕೆಗೆ ಹೆಣ್ತನವನ್ನು ಸಮಾಜ ನೀಡಿದೆ. ಗಂಡ ಸತ್ತರೆ ಅದೇ ಬಳೆ, ಬೊಟ್ಟು, ಕುಂಕುವನ್ನು ಹಾಗೂ ಹೆಣ್ಣಿಗೆ ಮದುವೆಯಲ್ಲಿ ದೊರಿತ ಕಾಲುಂಗುರ ಕರಿಮಣಿಗಳನ್ನು ಕಿತ್ತುಕೊಳ್ಳುವ ಸಮಾಜದ ಮಧ್ಯೆ ತುಳುನಾಡ ಹೆಣ್ಣು ಬದುಕಿದ್ದಳೆಂಬ ಸತ್ಯವನ್ನು ದ್ರೌಪದಿಯ ಘಟನೆ ತಿಳಿಸುತ್ತದೆ. ಆಕೆ ತಲೆಕೂದಲು, ಕೇಶಮುಂಡನ ಕ್ರಿಯೆಗೆ ಈಕೆ ಬಲಿಯಾಗಿದ್ದಳು. ಮರುಮದುವೆಗೆ ಅವಕಾಶಗಳಿಲ್ಲದ ಸ್ಥಿತಿ ಇತ್ತು. ಗಂಡಿಗೆ ಈ ಯಾವ ಮಿತಿಗಳಿಲ್ಲ. ಈ ಎಲ್ಲಾ ಪಾತ್ರಗಳಲ್ಲಿ ದ್ರೌಪದಿಯು ನೊಂದ ಪಾತ್ರವಾಗಿ ನಿಂತಿರುವುದನ್ನು ಗುರುತಿಸಲಾಗಿದೆ. ಆದ್ರಾಮನ ಸ್ನೇಹ ಆಕೆಯಲ್ಲಿ ಜೀವನದ ಮೇಲೆ ಭರವಸೆಯನ್ನು ಹುಟ್ಟಿಸಿತು. ಆದ್ರಾಮನು ಗೆಳೆಯನಾಗಿದ್ದು ಆಕೆಗೆ ಹಿಂದೂ ಧರ್ಮದಲ್ಲಿರುವ ದೋಷಗಳನ್ನು ತಿಳಿಸಿದ. ಇದು ಈಕೆಯಲ್ಲಿ ಮಹತ್ತರವಾದ ಬದಲಾವಣೆಯನ್ನುಂಟು ಮಾಡಿತು. ಮುಂದೆ ಆತನೇ ಈಕೆಯ ವಿವಾಹವಾಗುತ್ತಾಳೆ. ಜೊತೆಗೆ ಇವರ ಮದುವೆಗೆ ಬಂಟರ ಸಹಕಾರ ಒಲವು ದೊರೆತಿದೆ. ಬ್ರಾಹ್ಮಣ ಸಮಾಜದ ಈ ಪದ್ಧತಿ ತುಳುನಾಡಿನಲ್ಲಿ ಬದಲಾಗಬೇಕೆಂಬ ಆಶಯ ಇಲ್ಲಿದೆ. ಬದುಕುವ ಆಸೆ ಈ ಎಲ್ಲಾ ಜಡತೆಯನ್ನು ಮೀರಿದ ಸಂದರ್ಭವನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

'ಬ್ರಹ್ಮಜ್ಞಾನ'ವನ್ನು ಪಡೆದವನನ್ನು ಬ್ರಾಹ್ಮಣನೆಂದು ಗುರುತಿಸಲಾಗಿದೆ. ಇಲ್ಲಿ ಬ್ರಾಹ್ಮಣತ್ವವು ಮನುಷ್ಯತ್ವವನ್ನು ಕಡೆಗಣಿಸಿದೆ. ಜನಿವಾರದ ನಂಬಿಕೆಗಳನ್ನು ಆಚಾರಗಳನ್ನು ಅದರ ನಿಷ್ಠುರತೆಯನ್ನು ಹೆಬ್ಬಾರರು ಕಾದಂಬರಿಯುದ್ದಕ್ಕೂ ಸಮರ್ಥಿಸುತ್ತ ಬಂದಿದ್ದಾರೆ. ತುಳುನಾಡಿನ ಹಿಂದೆ ವಿವಾಹವನ್ನು ಬಂಧನವೆಂದು ಕರೆದರು. ಮದುವೆ ಸ್ವರ್ಗದಲ್ಲಿ ನಡೆಯುತ್ತದೆ ಎಂಬ ಚಿಂತನೆಗಳು ಮದುವೆಯನ್ನು ಆಕ್ರಮಿಸಿದುದೇ ಇದಕ್ಕೆ ಕಾರಣ. ಬಾಲ್ಯವಿವಾಹಕ್ಕೆ ಒಳಗಾದ ದ್ರೌಪದಿ ಒಂದು ವರ್ಷದಲ್ಲಿಯೇ ಬಾಲವಿಧವೆಯಾಗುವುತ್ತಾಳೆ. ವಿವಾಹದಲ್ಲಿ ಹೆಣ್ಣಿಗೊಂದು ಗಂಡಿಗೊಂದು ನ್ಯಾಯವಿದೆ. ಗಂಡು ಪುರುಷ ಪ್ರಪಂಚದ ಎಲ್ಲಾ ಧಾರ್ಮಿಕ ಸೌಕರ್ಯಗಳನ್ನು ಈ ನೆಲೆಯಿಂದ ಮರಳಿ ಪಡೆಯಬಲ್ಲ.

ಧರ್ಮ ಇವನ ಪರವಾಗಿದೆ. ಹೆಣ್ಣಿಗೆ ಧರ್ಮ ಧರ್ಮಸಂಕಟವನ್ನು ತರುತ್ತದೆ. ಆಕೆಗೆ ಮತ್ತೆ ಪುನ: ಮದುವೆ ಆಗುವ ಹಾಗಿಲ್ಲ. ಆಕೆ ನತದೃಷ್ಟೆ. ಅಪಶಕುನವೆಂಬ ನಿಂದನೆಗೆ ಒಳಗಾಗಬೇಕಿತ್ತು. ಮೇಲ್ವರ್ಗದ ದ್ರೌಪದಿಯ ಬದುಕು ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿತ್ತು. ಇವಳಿಗೆ ಸ್ವಾತಂತ್ರ್ಯವಿರಲಿಲ್ಲ. ಆಸ್ತಿಯಲ್ಲಿ ಹಕ್ಕಿರಲಿಲ್ಲ. ಹೀಗೆ ದ್ರೌಪದಿಯು ಹಳೆಯ ಸಂಪ್ರದಾಯಗಳೊಂದಿಗೆ ಬಂಧಿಯಾದ ಸ್ಥಿತಿಯನ್ನು ತಿಳಿಸುತ್ತದೆ. ಆದರೆ ಶೂದ್ರ ಮತ್ತು ದಲಿತರಲ್ಲಿ ಮಾತೃ ಪ್ರಧಾನ ಕುಟುಂಬ ವ್ಯವಸ್ಥೆ ಇದ್ದುದರಿಂದ ಈ ರೀತಿಯ ದುರಂತವಿಲ್ಲ. ಈ ಅಂತರ ಕಾದಂಬರಿಯಲ್ಲಿ ವ್ಯಕ್ತವಾಗಿದೆ.

ಆಧುನಿಕತೆಯ ಪ್ರವೇಶವಾದಂತೆ ತುಳುನಾಡು ಬದಲಾಯಿತು. ದ್ರೌಪದಿಯ ಅಪ್ಪನಾದ ಹೆಬ್ಬಾರರನ್ನು ವಿರೋಧಿಸಲು ಬೌದ್ಧಿಕ ನೆಲೆಯಿಂದ ಸಿದ್ಧವಾದಳು. ಸುರಗಿ ಮಠದ 'ಧರ್ಮಶಾಸ್ತ್ರಕ್ಕಾಗಿ' ಬದುಕುವ ನಿಲುವುಗಳನ್ನು ದ್ರೌಪದಿ ಕೈಬಿಡುತ್ತಾಳೆ. ಧರ್ಮದ ಒಳಗೆ ಭಾವನೆಗಳೇ ಇಲ್ಲದ ಜೀವಚ್ಛವವಾಗಿ ಬದುಕಿದವಳು ದ್ರೌಪದಿ. ಈ ಮಿತಿಯನ್ನು ಆಕೆಯು ಇಸ್ಲಾಂ ಧರ್ಮದ ಅದ್ರಾಮನನ್ನು ಮದುವೆಯಾಗುವುದರ ಮೂಲಕ ಮೀರುತ್ತಾಳೆ. ಎರಡು ಕೋಮುಗಳ ನಡುವೆ ನಡೆದ ಮದುವೆ ತುಳುನಾಡಿನಲ್ಲಿ ದೊಡ್ಡದಾದ ಸ್ಥಿತ್ಯಂತರವನ್ನು ನಿರ್ಮಿಸಿತು. ವಿವಾಹವೆನ್ನುವುದು ಗಟ್ಟಿಯಾಗಿ ರೂಪುಗೊಳ್ಳುವುದು ಭಾವನಾತ್ಮಕ ನಂಟಿನಿಂದ. ಧರ್ಮ ಕೊಟ್ಟ ಒಪ್ಪಿಗೆ ಅಂತಿಮವಲ್ಲವೆಂಬುದನ್ನು ತಿಳಿಸುತ್ತದೆ. ಜೊತೆಗೆ ನೂರು ವರ್ಷಗಳ ಹಿಂದೆ ಅಂತರ ಜಾತಿ ಮದುವೆ ಸಾಧ್ಯವಾಗಿದೆ ಎಂಬ ಸೂಕ್ಷ್ಮಪಲ್ಲಟಗಳು ತಿಳಿದುಬರುತ್ತವೆ. ತಂದೆಯಾದವನ ಜವಾಬ್ದಾರಿ ಮಕ್ಕಳ ಬೇಕು-ಬೇಡಿಕೆಗಳನ್ನು ತಿಳಿದುಕೊಳ್ಳುವುದು ಎಂಬ ಎಚ್ಚರದ ಸಂದೇಶವಿದೆ. ವೈದಿಕ ಧರ್ಮದಲ್ಲಿ ಸ್ತ್ರೀಯರನ್ನು, ಶೂದ್ರರನ್ನು ಸಮಾನವಾಗಿ ಕಾಣಲಾಗಿದೆ. ಈ ಎಲ್ಲಾ ಆಲೋಚನೆಗಳು ಇಲ್ಲಿ ತಲೆಕೆಳಗಾಗಿವೆ. ಧರ್ಮ ಸರ್ವಾಧಿಕಾರ ತೋರಿದಾಗ ಸಂಘರ್ಷವಾಗಿ, ಅದು ಸಾಮರಸ್ಯದಲ್ಲಿ ಅಂತ್ಯವಾಗಿದೆ. ಜಾರಂದಾಯ ನೇಮದ ಆಚರಣೆಯ ಸಂದರ್ಭದಲ್ಲಿಯೇ ಗಾಂಧಿ ಚಪ್ಪರದಡಿಯಲ್ಲಿ ದ್ರೌಪದಿಯ ವಿವಾಹವನ್ನು

ಮಾಡುವ ನಿರ್ಧಾರವನ್ನು ಗಾಂಧಿವಾದಿಗಳು ಮಾಡುತ್ತಾರೆ. ಧಾರ್ಮಿಕ ಚೌಕಟ್ಟಿನ ಒಳಗೆಯೇ ನಂಬಿಕೆ ಕುಸಿಯುವ ಹಾಗೆ ಮಾಡಲು ಅನ್ಯ ಧರ್ಮದ ಅದ್ರಾಮನೊಂದಿಗೆ ವಿಧವೆ ದ್ರೌಪದಿಯ ವಿವಾಹವನ್ನು ಗೊತ್ತು ಪಡಿಸುತ್ತಾರೆ. ಸಂಪ್ರದಾಯ ಬದ್ಧ ಹಬ್ಬಗಳಾದ ಅಷ್ಟಮಿ, ಚೌತಿಯ ಆಚರಣೆಗಳೊಟ್ಟಿಗೆ ಸಂಪ್ರದಾಯ ವಿರೋಧಿ ಮದುವೆ ನಡೆದು ಹೋಗುತ್ತದೆ. ಇಲ್ಲಿ ದ್ರೌಪದಿ–ಅದ್ರಾಮರ ಮದುವೆಗೆ ಯಾವ ಧರ್ಮದ ಬ್ಯಾಡ್ಜ್ ಅಡ್ಡಬಂದಿಲ್ಲ. ಮೇಲ್ವರ್ಗದ ಮಡಿವ್ಯೆಲಿಗೆ ಸೋಲುತ್ತದೆ. ಮುಸ್ಲಿಂ ವರ್ಗದ ಮೀನು ವಾಸನೆ, ಅಸ್ಪೃಶ್ಯರ ಬೆವರು ವಾಸನೆ ವಿಷಯವೇ ಆಗಲಿಲ್ಲ. ಧರ್ಮ ಶಾಸ್ತ್ರದ ನಿಷ್ಠುರ ನಿಯಮಗಳನ್ನು ದ್ರೌಪದಿಯ ಮದುವೆ ಸ್ಥಿತ್ಯಂತರಗೊಳಿಸಿದೆ.

ಕಾದಂಬರಿಯ ಇನ್ನೊಂದು ಪಾತ್ರ ದಾರು ಮಾರಪ್ಪರದು. ತುಳುನಾಡ ಜನರು ಮಕ್ಕಳಿಗೆ ಪ್ರಾಮುಖ್ಯತೆ ನೀಡುತ್ತಾರೆ. ಪತಿವ್ರತೆ, ಮೋಕ್ಷ, ಮುತ್ತೈದೆತನದಲ್ಲಿ, ಮಕ್ಕಳ ಪಾತ್ರ ಹಿರಿದು. ಇಲ್ಲಿ ಬರುವ ಪಾತ್ರ ದಾರು ಬಂಜೆ. ಹೆಣ್ಣು ಪತ್ನಿಯಾಗಿರುವುದಕ್ಕಿಂತ ತಾಯಿಯಾಗಿ, ಗೌರವಿಸಲ್ಪಡುವುದು ಇಲ್ಲಿನ ಸಂಸ್ಕೃತಿ. ಇದೆಲ್ಲ ಭೂಮಿಯನ್ನು ತಾಯಿ ರೂಪಕದಲ್ಲಿ ಪೂಜಿಸುವುದರ ಮೂಲಕ ಗ್ರಾಹ್ಯವಾಗುತ್ತದೆ. ಪುರಾತನ ಕಾಲದಲ್ಲಿ ಮಕ್ಕಳಿಗಾಗಿ ಹೆಣ್ಣುಗಳನ್ನು ಗಂಡುಗಳು ಕೂಡುತ್ತಿದ್ದರು. ತಂದೆಯ ಮೂಲಕ ಅಸ್ಥಿತ್ವ ರೂಪುಗೊಳ್ಳುತ್ತಿತ್ತು. ಗಂಡು ಹೆಣ್ಣಿಗೆ ತಾಯ್ತನ ನೀಡಿದ ಸಂದರ್ಭದಲ್ಲಿಯೂ ಪುರುಷನು ಅಹಂನ್ನು ಪ್ರದರ್ಶಿಸುತ್ತಾನೆ. ತಾಯಿ ಆಗದಿದ್ದಾಗಲೂ ದೋಷ ಹೆಣ್ಣಿನದೆಂದು ನಿರ್ಧರಿತವಾಗುತ್ತದೆ. ಬೀಜದ ದೋಷ ಕಡಿಮೆ ಮಣ್ಣಿನ ದೋಷವೇ ಪ್ರಧಾನವಾಗಿ ಇಲ್ಲಿ ಕಾಣಿಸಿಕೊಂಡಿದೆ. ಕುಂಟುಬಿಲ್ಲೆಯಾಡುವ ವಯಸ್ಸಿಗೆ ತಾಯ್ತನವನ್ನು ನೀಡಿದ ಸಂದರ್ಭ ತುಳುನಾಡಿನಲ್ಲಿ ಇದೆ. ಇಲ್ಲಿ ಬರುವ ದಾರು ಲೋಕದ ದೃಷ್ಟಿಯಲ್ಲಿ ಸುಂದರಿ. ಇದು ಅವಳಿಗೆ ಬಂಜೆಯ ಪಟ್ಟವನ್ನು ನೀಡಿದೆ. ಇದು ಕಾದಂಬರಿ ಮುಂದಿರುವ ಸಮಾಜ ರಚನೆ. ಅರ್ಥಹೀನ ಬಂಜರು ಬದುಕು, ತಾಯ್ತನ ಮುಖ್ಯವೆಂದು ದಾರುವನ್ನು ಸಮಾಜ ನೋಡಿತ್ತು. ಆಗಲೇ ದಾರುವಿನ ಬದುಕಲ್ಲಿ ಮಾರಪ್ಪನ ಪ್ರವೇಶ ಈಕೆಯನ್ನು ಮದುವೆಯಾಗುವುದರ ಆಲೋಚನೆಯನ್ನುಂಟುಮಾಡಿದೆ. ಬದುಕಲು ಸಾಧ್ಯವಾದ ಬಾಗಿಲುಗಳನ್ನು ಆಚಾರದಿಂದ ಮುಚ್ಚಿಸುವುದು ಸಮಾಜದ ಬಹುಮುಖ್ಯ ಕೆಲಸವಾದರೆ, ವಿಚಾರದಿಂದ ಒಡೆದು ಕಟ್ಟುವುದು ಇನ್ನೊಂದು ಕೆಲಸವಾಗಿ ಕಾದಂಬರಿಯಲ್ಲಿ ಕಾಣಿಸಿಕೊಂಡಿದೆ. ತುಳುನಾಡ ಸಂಸ್ಕೃತಿಯಲ್ಲಿ ಹುಟ್ಟಿದ ಬಿರುಕುಗಳನ್ನು ದಾರು, ದ್ರೌಪದಿಯರ ಮದುವೆ ಬದಲಾಯಿಸಿತು.

'ಈಕೆಗೆ ಗರ್ಭಕೋಶವೇ ಇಲ್ಲ'. ('ಗಾಂಧಿ ಬಂದ' ಪು.ಸಂ. ೧೨೦. ಇಲ್ಲಿ ಗಮನಿಸಬೇಕು). ತಾಯ್ತನವನ್ನು ರಕ್ಷಿಸುವ ಗರ್ಭಕೋಶವನ್ನು ಮುಂದಿಟ್ಟುಕೊಂಡು ಸಂಕಟ ಪಡುವ ಬದುಕು ಇಲ್ಲಿ ಅನಾವರಣಗೊಂಡಿದೆ. ಹೆಣ್ಣನ್ನು ತಾಯ್ತನಕ್ಕಾಗಿ ರೂಪಿಸುವ ಸಮಾಜದ ಕಟ್ಟುಕಟ್ಟಳೆಗಳನ್ನು ಮೀರಿ ಬೆಳೆದ ಪಾತ್ರ ದಾರು. ಲಿಂಗಬೇಧ ನೀತಿ ಸಡಿಲಗೊಳ್ಳುತ್ತದೆ. ಆರ್ಥಿಕ ಸ್ವಾವಲಂಬನೆಯಲ್ಲಿ ಗುರುತಾಗದ ಸ್ಥಿತಿ ಹಿಂದೆ ಹೆಣ್ಣಿನದು. ಇದನ್ನು ಆಕೆಯ ಸಾಮಾಜಿಕ ಅರಿವು ಒಡೆದವು. ಸಮಾಜದ

ವ್ಯಂಗ್ಯ, ಟೀಕೆ, ಅಪಹಾಸ್ಯಗಳು ಜೀವನೋತ್ಸಾಹಗಳ ಮುಂದೆ ಸೋತವು. ಬಾಲ್ಯ ವಿವಾಹದ ನಿಷಿದ್ಧವೂ ನಡೆಯಿತು. ವಿಧವೆಗೆ ಮರುಮದುವೆ ದ್ರೌಪದಿಯ ನೆಲೆಯಲ್ಲಿ ನಡೆಯಿತು. ಮಕ್ಕಳು ಇರಬೇಕು ಎಂಬ ಚಿಂತನೆಗಳನ್ನು ಮೀರಿ ಮದುವೆ ಪಕ್ವಗೊಂಡಿತು. ಬಂಧನವಾಗಿದ್ದ ವಿವಾಹ ನೀತಿಯು ವ್ಯಕ್ತಿ ಸ್ವಾತಂತ್ರ್ಯವಾಗಿ ಅಧುನಿಕ ಸಂದರ್ಭದಲ್ಲಿ ಬದಲಾಯಿತು. ಮಾರಪ್ಪನ ಮೇಲೆ ಗಾಂಧಿಯ ಪ್ರಭಾವ ಆಗಿದೆ. ಗಾಂಧಿ ತತ್ವವನ್ನು ಅನುಷ್ಠಾನ ಮಾಡುವ ವ್ಯಕ್ತಿಯಾಗಿ ಕಾಣಿಸಿಕೊಂಡಿದ್ದಾನೆ. ಮಾರಪ್ಪನ ಒಂದು ಆದರ್ಶದ ಅನಾವರಣ ದಾರುವನ್ನು ಮದುವೆ ಆಗುವುದರ ಮೂಲಕ ಸಾಧ್ಯವಾಗಿಸಿದೆ.

### 5. <u>ಆರ್ಥಿಕ ವ್ಯವಸ್ಥೆಯ ಸ್ಥಿತ್ಯಂತರಗಳು:</u>

ತುಳುನಾಡಿನ ವ್ಯವಸ್ಥೆಯನ್ನು ಆರ್ಥಿಕ ನೆಲೆಗಟ್ಟುಸಂಪೂರ್ಣವಾಗಿ ನಿಯಂತ್ರಿಸಿದೆ. ಆರ್ಥಿಕತೆಯನ್ನು ನಿಯಂತ್ರಿಸಲೆಂದು ವರ್ಗ ವ್ಯವಸ್ಥೆ ಸೃಷ್ಟಿಯಾಗಿತ್ತು. ದಣಿಗಳಿಗೆ ಮಕ್ಕಳನ್ನು ಒತ್ತೆಯಿಟ್ಟು ಜೀವನಪೂರ್ತಿ ಜೀತದಾಳಾಗಿ ಬದುಕಿದ ದಲಿತರ ಬದುಕು ತುಳುನಾಡಿನಲ್ಲಿತ್ತು. ಈ ಕ್ರೂರ ಪದ್ಧತಿಯ ಇಣುಕುನೋಟ ಕಾದಂಬರಿಗಾರ್ತಿಯ 'ಗೇಣಿದಾರರ ಏಣಿಯಾಟ' ಲೇಖನದಲ್ಲಿ ಗುರುತಿಸಬಹುದು. ಈ ಎಲ್ಲಾ ಕ್ರೂರತೆಯು ಕೈಗಾರಿಕೀಕರಣ ಶಿಕ್ಷಣದ ಪ್ರವೇಶದಲ್ಲಿ ಬದಲಾಯಿತು. ಶ್ರೇಣಿಕೃತ ವ್ಯವಸ್ಥೆಯ ಮೂಲಕ ಸ್ಥಗಿತವಾದ ಆರ್ಥಿಕ ಸ್ಥಿತಿಯು ಬದಲಾಯಿತು. ಮಂಗಳೂರಿನಲ್ಲಿ ಜನರು ಕೆಲಸ ಕಂಡುಕೊಂಡರು. ಕಾರ್ಖಾನೆಗಳ ನಿರ್ಮಾಣವಾಯಿತು. ಬೀಡಿ ಕಂಪೆನಿಗಳು ಪ್ರಾರಂಭವಾಯಿತು. ಹೀಗೆ ಉಂಟಾದ ಸ್ಥಿತ್ಯಂತರವು ಆಳು–ಒಡೆಯನಲ್ಲಿ ಅಂತರವನ್ನು ಸಂಘರ್ಷದ ನೆಲೆಯಲ್ಲಿ ಉಂಟುಮಾಡಿತು. ಬ್ರಾಹ್ಮಣರು ಒಂಟಿಯಾದರೆ ಶೆಟ್ಟರು ಮತ್ತು ಅಸ್ಪೃಶ್ಯರು ಈ ಸಂದರ್ಭದಲ್ಲಿ ತೀರಾ ಹತ್ತಿರವಾದರು. ಪಣಂಬೂರು ಬಂದರು ನಿರ್ಮಾಣವಾಯಿತು. ಪೂರ್ತಿ ಆಧುನೀಕತೆಯ ಪ್ರವೇಶವಾಯಿತು. ಇಲ್ಲಿ ಗಾಂಧಿಯು ತುಳುನಾಡಿಗೆ ಬಂದು ಹೋದಾಗ ಗಾಂಧಿ ತತ್ವದ ಪ್ರಬಲತೆಯು ತುಳುನಾಡಿನ ಸಂಸ್ಕೃತಿಯ ಮೇಲೆ ಪ್ರಭಾವ ಬೀರಿದೆ. ಇದರ ಪರಿಣಾಮ ಜನಜೀವನದಲ್ಲಿ ಬದಲಾಗಿದೆ.

ಕೂಲಿಯಾಳುಗಳ ಜೀವನ ಸ್ಥಿತಿ ಬದಲಾಯಿತು. ಭೂಸುಧಾರಣ ನೀತಿಯು ಅನೇಕ ರೈತರಿಗೆ ಸ್ವಂತ ಭೂಮಿಯನ್ನು ನೀಡಿತು. ಊಳುವವನೆ ಹೊಲದೊಡೆಯ ಆದ. ದಣಿಗಳ ಗೇಣಿದಾರರ ಏಣಿಯಾಟ ನೆಲಕಚ್ಚಿತು. ಶ್ರೇಣಿಕೃತ ವ್ಯವಸ್ಥೆಯ ಬುಡ ಈ ಮೂಲಕ ಅಲ್ಲಾಡಿತು. ಹಣ ಮನುಷ್ಯನ ಕೈಗೆ ಬಂದರೆ ಮಾತು, ವ್ಯವಹಾರ, ಬದುಕುವುದನ್ನು ಕಲಿಸುತ್ತದೆ ಎಂಬುದನ್ನು ಈ ಕಾದಂಬರಿಯಲ್ಲಿ ನಡೆಯುವ ಪಲ್ಲಟಗಳು ತಿಳಿಸುತ್ತವೆ. ಆ ಮೂಲಕ ಸಾಮಾಜಿಕ ಮತ್ತು ಧಾರ್ಮಿಕ ನೆಲೆಗಳಲ್ಲಿ, ಸಂಸ್ಕೃತಿಯ ನೆಲೆಗಳಲ್ಲಿ ಸ್ಥಿತ್ಯಂತರವಾಯಿತು. ಹೆಣ್ಣು ಮಕ್ಕಳು ಸಮಾಜದ ಮುಖ್ಯವಾಹಿನಿಗೆ ಬಂದರು. ಬೀಡಿ ಕಟ್ಟುವುದು, ಕಾರ್ಖಾನೆಗಳಲ್ಲಿ ದುಡಿಯುವುದು ಖಾಯಂ ಆಯಿತು. ದುಡಿಯುವ ಮೌಲ್ಯದ ಪ್ರವೇಶ ದಲಿತರಲ್ಲಿ ಹೆಣ್ಣು ಗಂಡೆನ್ನದೆ ಹೊಸ ಶಕ್ತಿಯನ್ನು ತುಂಬಿತು. ಇದಕ್ಕೆ ಮೂಲ ಪ್ರೇರಣೆಯಾಗಿ ಗಾಂಧೀಜಿಯ ಚಳುವಳಿಗೆ ಜನರು ಪ್ರತಿಕ್ರಿಯಿಸಿದರು. ಖಾದಿ ಬಟ್ಟೆ ಪ್ರಚಾರದಲ್ಲಿ

ಗುತ್ತಿನ ಶೆಟ್ಟರು ಖಾದಿ ಸೀರೆ ತಂದು ಪ್ರಚಾರ ನೀಡಿದರು. ಹೀಗೆ ಗಾಂಧಿಯ ಪ್ರಧಾನ ಅಸ್ತ್ರವಾದ ಸ್ವದೇಶಿ ಚಳುವಳಿಯು ದುಡಿಯುವ ವರ್ಗದವರ ಮೇಲೆ ಪ್ರಭಾವ ಬೀರಿತ್ತು.

ಆರ್ಥಿಕ ಸ್ಥಿತ್ಯಂತರದ ಸ್ಥಿತಿಯ ಪರಿಣಾಮ ಕುಲ ಕಸುಬುಗಳನ್ನು ಸ್ವಲ್ಪ ಮಟ್ಟಿಗೆ ಬದಲಾಯಿತು. ಕಂಬಾರನು ಮಡಿಕೆ ಮಾಡುವ ಸ್ಥಿತಿಯ ಅಗತ್ಯವಿಲ್ಲದ ಪ್ಲಾಸ್ಟಿಕ್ ಸಮಾಜದ ನಿರ್ಮಾಣವಾಗುತ್ತಿದೆ. ಕೈಮಗ್ಗದ ಬಟ್ಟೆಯ ಸ್ಥಾನದಲ್ಲಿ ವಿದೇಶಿ ವಸ್ತ್ರಗಳು ಬಂದಿವೆ. ಅಂಟ್ವಾಳ ಕಾಯಿಯ ಸ್ಥಳದಲ್ಲಿ ಕಾರ್ಖಾನೆಯಿಂದ ತಯಾರಾದ ಸರ್ಫ್ ಹುಡಿಗಳು ಕಾಣಿಸಿಕೊಂಡಿವೆ. ಚಾಪೆಯ ಬದಲಾಗಿ ಪ್ಲಾಸ್ಟಿಕ್ ವಸ್ತುಗಳು ಆಶ್ರಯಿಸಿವೆ. ಗಾಂಧಿ ರಾಮರಾಜ್ಯದ ಕನಸನ್ನು ಸರ್ವಾಂಗೀಣ ನೆಲೆಯಲ್ಲಿ ಅಪೇಕ್ಷಿಸಿದ್ದರು. ಗಾಂಧಿಯೇನು ಯಂತ್ರ ವಿರೋಧಿಯಲ್ಲ. ಯಂತ್ರಗಳು ನಮ್ಮ ಮಾಲೀಕರಾಗುವುದು ಬೇಡವೆಂಬ ಅಭಿಪ್ರಾಯ ವ್ಯಕ್ತಪಡಿಸಿದರು. ಚಮ್ಮಾರ, ಅಕ್ಕಸಾಲಿಗರು ಜಾತಿಯಿಂದ ಬಂದ ವೃತ್ತಿ, ಕೌಶಲ್ಯಗಳನ್ನು ಮಾಡಲು ಸಾಧ್ಯವಾದ ಸಮಾಜ ಇಲ್ಲಿದೆ. ಇವೆಲ್ಲ ಆಧುನಿಕತೆಯ ದಟ್ಟ ಪ್ರಭಾವಕ್ಕೆ ಸಿಕ್ಕಿ ಸ್ಥಿತ್ಯಂತರಗೊಂಡ ಸ್ಥಿತಿಯಾಗಿದೆ. ಕಾಡುಗಳ ನಾಶವಾಗಿದೆ. ಮುಂದಿನ ಪೀಳಿಗೆಗೆ ವಸ್ತುನಿಷ್ಠವಾಗಿ ಹೆಚ್ಚಿನ ವಿಷಯಗಳ ಮಾಹಿತಿ ನೀಡಲಾಗದ ಅಳಲು ಕಾದಂಬರಿಯೊಳಗೆ ಇದೆ. ಆರ್ಥಿಕತೆಯು ಪ್ರಕೃತಿಯನ್ನು ಹೊರತುಪಡಿಸಿ ಅಭಿವೃದ್ಧಿ ಹೊಂದಿದಾಗ ಪ್ರಾಕೃತಿಕವಾಗಿ, ಜೈವಿಕವಾಗಿ ಜೀವರಾಶಿಗಳಿಗೆ ತೊಂದರೆಯಾಗಿರುವುದು ಗಮನಾರ್ಹ ವಿಷಯ.

### 6. ಸಾಂಸ್ಕೃತಿಕ ಬದಲಾವಣೆ:

ಸಂಸ್ಕೃತಿಯೆಂದರೆ ಸರಳವಾಗಿ ಹೇಳುವುದಾದರೆ ಜೀವನಕ್ಕೆ ಸಂಬಂಧಪಟ್ಟದ್ದು. ಸಾಂಸ್ಕೃತಿಕ ಬದಲಾವಣೆ ಎಂದರೆ ಒಂದು ರೀತಿಯಲ್ಲಿ ಸಾಮಾಜಿಕ ಬದಲಾವಣೆಯೆಂದರ್ಥ. ತುಳುನಾಡಿನಲ್ಲಿ ಏಕ ಸಂಸ್ಕೃತಿಯಿಲ್ಲ. ಬಹು ಸಂಸ್ಕೃತಿಯಿದೆ. ಬಹು ಭಾಷೆ ಜನಾಂಗ ಆಚಾರವಿಚಾರಗಳಿವೆ. ಇಲ್ಲಿ ಪ್ರಸಿದ್ಧ ಆಚರಣೆ ಹಾಗೂ ಕ್ರೀಡೆಯಾದ ಕಂಬಳವಿದೆ ಇಲ್ಲಿ ಎಲ್ಲರೂ ಸೇರುವ ಸಾಮರಸ್ಯದ ದೃಷ್ಟಿಯಿದೆ. ಇದು ಕೇವಲ ಒಂದು ಸ್ಪರ್ಧೆ ಆಗುವುದಿಲ್ಲ. ಇದು ತುಳುವರ ಬದುಕಿನ ವಿವಿಧ ಆಯಾಮಗಳನ್ನು ಪರಿಚಯಿಸುತ್ತದೆ. ದೂರದೂರಿನ ಸಂಬಂಧಿಗಳ ಆಗಮನದ, ಭಿನ್ನ ಜಾತಿಗಳ ಸಂಬಂಧ ಪರಿಚಯವಾಗುವ ಸ್ಥಳವಾಗುತ್ತಿತ್ತು. ಇಡೀ ಊರಿನ ಜನರು ಈ ಕ್ರೀಡೆಯಲ್ಲಿ ತಮನ್ನು ತೊಡಗಿಸಿಕೊಳ್ಳುತ್ತಿದ್ದರು.

ಕಾದಂಬರಿಯ ಹಿನ್ನೆಲೆಯಲ್ಲಿ ಹೇಳುವುದಾದರೆ ತುಳುನಾಡ ಸಂಸ್ಕೃತಿಯಲ್ಲಿ ಮುಖ್ಯವಾಗಿ ಭೂತಾರಾಧನೆ, ಕಂಬಳ, ಕೋಳಿ ಅಂಕಗಳಲ್ಲಿ ಆದ ಬದಲಾವಣೆ ಸಾಂಸ್ಕೃತಿಕ ಸ್ಥಿತ್ಯಂತರವನ್ನು ತಿಳಿಸುತ್ತವೆ. ಭೂತಾರಾಧನೆಯು ಜನರ ರಂಗಭೂಮಿಯ ಭಾಗವಾಗಿ ನೆಲೆನಿಂತಿದೆ. ಅಲೌಕಿಕ ಜಗತ್ತಿನಲ್ಲಿ ಭೂತಗಳ ವಾಸಸ್ಥಾನವಿದೆಯೆಂಬ ನಂಬಿಕೆ ಇದೆ. ಅನಾದಿ ಕಾಲದಿಂದ ನಂಬಿಕೆಗಳೊಂದಿಗೆ ಬದುಕುವ ಮನುಷ್ಯ ಗುಡ್ಡಗಾಡುಗಳನ್ನು ದಾಟಿ ನಗರಕ್ಕೆ ಬಂದ. ನಂಬಿಕೆಗಳು ನಗರೀಕರಣದಲ್ಲಿ ಹೊಸ

ಅಸ್ತಿತ್ವವನ್ನು ಪಡೆದುಕೊಂಡವು. ಆಹಾರ ಮತ್ತು ಆಚರಣೆಯ ಸಂದರ್ಭದಲ್ಲಿ ಬ್ರಾಹ್ಮಣರು ಮತ್ತು ಅಬ್ರಾಹ್ಮಣರು ಪ್ರಾರ್ಥಿಸುವ ಭೂತಗಳಿಗೆ ಜಾತಿ ಸಂಪ್ರದಾಯಗಳ ಪ್ರಕಾರ ಆಹಾರ ನೈವೇದ್ಯಗಳನ್ನು ನೀಡಲಾಯಿತು. ಪ್ರಾಣಿಬಲಿಯನ್ನು ಶೂದ್ರರು, ದಲಿತರು ನೀಡಿದರೆ, ಸಸ್ಯಾಹಾರವನ್ನು ಮೇಲ್ಜಾತಿಯವರು ನೀಡಿದರು. ಆರಾಧನೆಯ ನೆಲೆಯಿಂದ ಇವರಿಗೆ ಸ್ವಾತಂತ್ರ್ಯ ದಕ್ಕಿತು. ಹೀಗೆ ಭೂತಾರಾಧನೆಯು ಸಾಮಾಜಿಕ ನಂಬಿಕೆಗಳನ್ನು ಅಲ್ಲಾಡಿಸಿತು. ಕೊರಗರ ಬದುಕಿನ ದಿಕ್ಕು ಬದಲಾಯಿತು. ವೇಷತೊಟ್ಟ ವ್ಯಕ್ತಿಗೆ ಊರ ಯಜಮಾನನ ಹೆಸರು ಹೇಳಿ ಕರೆಯುವ ವ್ಯಕ್ತಿ ಸ್ವಾತಂತ್ರ್ಯ ದಕ್ಕಿತು. ಸಮೂಹದ ಸ್ವಾತಂತ್ರ್ಯ ದಕ್ಕಿತು. ಆಧುನಿಕ ಸಂದರ್ಭಗಳು ಆರಾಧನೆಯನ್ನು ಕಲೆಯ ಅಧ್ಯಯನವಾಗಿ ನೋಡಿದರು. ಕಾದಂಬರಿಯೊಳಗೆ ಕಾಣುವ ಮನುಷ್ಯ ಪ್ರಪಂಚವು ಭೂತದ ಕಣ್ಣಿಗೆ ಬದುಕಿ ಬಾಳಬೇಕಾದವರಾಗಿ ಮಾತ್ರ ಕಾಣಿಸುತ್ತದೆ. ಅದ್ರಾಮ, ದ್ರೌಪದಿ, ಕೊರಗರ ಐತು, ಎಲ್ಲರಿಗೂ ಗಂಧ ಪ್ರಸಾದ ಶ್ರೇಣೀಕರಣದ ಒಳಗೆ ಸಿಕ್ಕಿದೆ. ಸಿರಿಯಂತಹ ಜಾತ್ರೆಯ ಆರಾಧನೆಯಲ್ಲಿ ತುಳುನಾಡ ಹೆಣ್ಣು ಮಗಳೊಬ್ಬಳ ವೈಯಕ್ತಿಕ ವಿವರಗಳು ಸಿಗುವುದು. ಬಂಟರ ಹೆಣ್ಣುಗಳಿಗೆ, ಸಾಮಾನ್ಯ ಜಾತಿ ಹೆಣ್ಣುಗಳಿಗೆ ಎಚ್ಚರವಾಗುತ್ತದೆ. ಹೀಗೆ ಭೂತಾರಾಧನೆಯು ಸಮೂಹದ ನೆಲೆಯಲ್ಲಿ ಶಕ್ತಿ ಪಡೆಯಿತು. ತುಳುನಾಡಿನ ವಿಶಿಷ್ಟ ಆರಾಧನೆ ಭೂತಾರಾಧನೆ ಪ್ರತಿಯೊಂದು ಜಾತಿಯವರನ್ನು ಒಳಗೊಳ್ಳುತ್ತದೆ. ಕೊರಗರ ಐತುವಿನಿಂದ ಹಿಡಿದು ಬ್ರಾಹ್ಮಣ ಹೆಬ್ಬಾರರ ತನಕ ಎಲ್ಲಾ ಪಾತ್ರಗಳು ಸಾಂಸ್ಕೃತಿಕ ಸಂದರ್ಭಗಳಲ್ಲಿ ಭಾಗವಹಿಸುತ್ತವೆ. ಜಾತಿಗಳು ಇಲ್ಲಿ ಒಂದಾಗಿ ಬೆರೆಯಲು ಅವಕಾಶವಾಗಿದೆ. ಈ ಪರಿವರ್ತನೆ ಪರೋಕ್ಷವಾಗಿ ಗಾಂಧಿತತ್ವದಿಂದ ಉಂಟಾಗಿದೆ.

ಕಂಬಳದಲ್ಲಿಯೂ ಸಾಕಷ್ಟು ಸ್ಥಿತ್ಯಂತರಗಳಾಗಿವೆ. ಹಿಂದೆ ಕಂಬಳದ ಕೋಣವನ್ನು ಆಚರಣೆಯ ನೆಲೆಯಲ್ಲಿ ಮಾಡಲಾಗುತ್ತಿತ್ತು. ಹಿಂದೆ ತಿನ್ನಲು ಅವಕ್ಕೆ ಹುರುಳಿ, ಭತ್ತದ ತೌಡು, ಕುಡಿಯಲು ಕಳ್ಳುಗಳನ್ನು ನೀಡಿದರೆ, ಇಂದು ಮುಸಂಬಿ, ಬೀಟ್‌ರೂಟ್, ಶರಾಬುಗಳನ್ನು ನೀಡುತ್ತಿದ್ದಾರೆ. ಕೋಣಗಳು ಮಲಗುವ ಹಟ್ಟಿಗೆ ಫ್ಯಾನ್ ಅಳವಡಿಸಿರುವುದು ಸ್ಥಿತ್ಯಂತರವಾದ ಕೋಣಗಳ ಜೀವನಕ್ರಮವನ್ನು ತಿಳಿಸುತ್ತದೆ. ಸಮಾಜ ಎಷ್ಟೇ ಸುಧಾರಿಸಿಕೊಂಡಿದ್ದೇವೆ ಎಂದರೂ, ಸಹಸ್ರಾರು ಕೊರಗರ ಗುಡಿಸಲಿಗೆ ವಿದ್ಯುತ್ ದೀಪಗಳು, ಫ್ಯಾನುಗಳು ಇನ್ನೂ ಬಂದಿಲ್ಲವೆನ್ನುವುದು ಮುಖ್ಯವಾಗುತ್ತದೆ. ಕಂಬಳದ ಗದ್ದೆಯನ್ನು ಬೃಹತ್ ಬಂಡವಾಳಶಾಹಿಗಳು ಆಕ್ರಮಿಸಿಕೊಂಡಿವೆ. ಜೂಜು ಮೋಜಿನ ಆಗರವಾಗಿದೆಯೆಂದರೆ ಆಶ್ಚರ್ಯವಾಗದು.

ಕೋಳಿ ಅಂಕವು ಹಿಂದೆ ಜಾತ್ರೆ, ಭೂತದ ಕೋಲ, ಕಂಬಳ ಇತ್ಯಾದಿ ವಿಶೇಷ ದಿನಗಳಲ್ಲಿ ಜರಗುತ್ತಿತ್ತು. ಸಾಮಾನ್ಯ ಮೈದಾನ, ಒಣ ಗದ್ದೆಯಲ್ಲಿ ಅಂಕಗಳು ನಡೆಯುತ್ತವೆ. ಕೋಳಿ ಅಂಕವು ಹಿಂದೆ ರಾತ್ರಿ ಕಾಲದಲ್ಲಿ ನಡೆಯುತ್ತಿತ್ತು. ಈಗ ಹಗಲು ಹೊತ್ತಿನಲ್ಲಿಯೂ ನಡೆಯುತ್ತದೆ. ಆಧುನಿಕ ಕಾಲದಲ್ಲಿ ಕೋಳಿ ಅಂಕ ಮನೋರಂಜನೆಗೆ ಮಾತ್ರವಲ್ಲದೆ ಹಣದ ಉದ್ದೇಶಕ್ಕಾಗಿ ಜರುಗುತ್ತದೆ. ಒಟ್ಟಿನಲ್ಲಿ ಈ ಕ್ರೀಡೆಯಲಿ ಸ್ವರೂಪದಲ್ಲೂ ವ್ಯತ್ಯಾಸವಾಗಿದೆ.

ಚೌತಿ ಹಬ್ಬದಲ್ಲಿ ಕದಿರುಕಟ್ಟುವ ಕ್ರಮವನ್ನು ಆಚರಿಸಲಾಗುತ್ತದೆ. ಕೃಷಿಭೂಮಿ ಕೈಗಾರಿಕೆಗಳ ದಾಳಿಗೆ ಸಿಕ್ಕಿ, ಆಧುನಿಕ ಕೃಷಿಗಳ ಪ್ರವೇಶವಾದಾಗ, ದಕ್ಷಿಣ ಕನ್ನಡದ ಕೆಲವು ಭಾಗಗಳಲ್ಲಿ ನೀರಸ ವಾತಾರವಣ ಉಂಟಾಗಿದೆ. ಜೊತೆಗೆ ಕ್ಷೀಣಿಸುತ್ತಿದೆ. ಮೊಸರುಕುಡಿಕೆಯು ಅಷ್ಟಮಿಯಲ್ಲಿ ನಡೆಯುವ ಕ್ರೀಡೆ. ಐದು ಬೆಳ್ಳಿ ಪಾವಲಿಗಳನ್ನು, ಮೊಸರಕುಡಿಕೆ ಒಳಗೆ ಹಾಕುತ್ತಾರೆ. ಒಂದು ಬಾಳೆಗೊನೆಯು ಇರುತ್ತದೆ. ಅಡಿಕೆ ಮರವನ್ನೇರಿ ಮಡಿಕೆ ಮುಟ್ಟಿದವರಿಗೆ ಮಡಿಕೆ ಎಂಬುದನ್ನು ಕಾದಂಬರಿ ತಿಳಿಸುತ್ತದೆ. ಆದರೆ ಈ ಎಲ್ಲಾ ಜನಪದ ಆಟಗಳು ಕೆಲವು ಇಂದು ಅರ್ಥ ಕಳೆದುಕೊಂಡಿವೆ. ಯಂತ್ರಯುಗದ ಸನ್ನಿವೇಶದಲ್ಲಿ ಎಲ್ಲೆಂದರಲ್ಲಿ ಈ ಆಟ ಜರುಗುತ್ತದೆ. ಹಾಗೆ ಜರುಗಿದಾಗ ಮೊಸರುಕುಡಿಕೆಯು ಬದಲಾಗಿ ಖಾಲಿ ಡಬ್ಬಗಳಿಗೋ, ಪ್ಲಾಸ್ಟಿಕ್ ಕ್ಯಾನ್‌ಗಳಿಗೋ ಸೀಮಿತಗಾಗಿರುವುದು ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ತಿಳಿಸುತ್ತದೆ. ಒಟ್ಟಿನಲ್ಲಿ ಈ ಎಲ್ಲಾ ಸಾಂಸ್ಕೃತಿಕ ಸ್ಥಿತ್ಯಂತರಗಳು ಆಧುನಿಕತೆಯ ಪರಿಣಾಮವಾಗಿ ಉಂಟಾಗಿದೆಯಲ್ಲದೆ, ಗಾಂಧಿಯ ಸಾಂಸ್ಕೃತಿಕ ಕಾಳಜಿಯು ಈ ಬದಲಾವಣೆಯನ್ನು ಪಡೆಯಲು ಸಾಧ್ಯವಾಗಿಲ್ಲ.

**ಟಿಪ್ಪಣಿಗಳು:**

1. **ಉರಲ್‌**– ತುಳುನಾಡಿನಲ್ಲಿ ಗದ್ದೆ ಉಳುವಾಗ ಹಾಡುವ ಹಾಡು. ಕಂಬಳದ ದಿನ ದಲಿತರಾದ ಕೊರಗರು ಡೋಲು ಬಡಿಯುತ್ತಾ ಈ ಹಾಡನ್ನು ಹಾಡುತ್ತಾರೆ. ಉರಲ್‌ಗಳಲ್ಲಿ ದಲಿತವರ್ಗದ ನೋವು ನಲಿವುಗಳ ಅಭಿವ್ಯಕ್ತಿಯಿದೆ.

2. **ಪನಿಕುಲ್ಲುನು**– ಕಂಬಳದ ಹಿಂದಿನ ರಾತ್ರಿ ಕೊರಗರು ಡೋಲು ಬಡಿಯುತ್ತಾ ಹಾಡು ಹಾಡುತ್ತಾ, ಕುಣಿಯುತ್ತಾ ರಾತ್ರಿ ಜಾಗರಣೆ ಮಾಡುವ ಆಚರಣೆ.

# ಅಧ್ಯಾಯ – ಮೂರು

## ಕಾದಂಬರಿಯಲ್ಲಿ ಸಾಮಾಜಿಕ ಸಂಘರ್ಷ ಮತ್ತು ಸಾಮರಸ್ಯದ ನೆಲೆಗಳು

ಸಂಸ್ಕೃತಿಗೆ ಮಾನವಶಾಸ್ತ್ರಜ್ಞರು ನೂರಾರು ವ್ಯಾಖ್ಯೆಗಳನ್ನು ನೀಡಿದ್ದಾರೆ. ಖಚಿತವಾಗಿ ಸಂಸ್ಕೃತಿಯನ್ನು ವಿವರಿಸುವುದು ಕಷ್ಟ. ಆದರೆ ಒಂದು ಪ್ರದೇಶದಲ್ಲಿ ಬದುಕುವ ಜನರ ಜೀವನ ಕ್ರಮವನ್ನು ಸಂಸ್ಕೃತಿಯೆಂದು ಕರೆಯಬಹುದು. ಆ ಪ್ರದೇಶದ ಭೌಗೋಳಿಕ ಪರಿಸರ ಮತ್ತು ಜನರ ಸ್ವರೂಪ, ಸ್ವಭಾವ, ಸಂಸ್ಕೃತಿಯ ಸ್ವರೂಪವನ್ನು ನಿರ್ಧರಿಸುತ್ತವೆ. ಪ್ರಾಣಿ ಸ್ಥಿತಿಯಿಂದ ಬೆಳವಣಿಗೆ ಹೊಂದಿದ ಮನುಷ್ಯನು 'ವಿಶಿಷ್ಟ'ವಾದುದನ್ನು ಗಳಿಸಿಕೊಂಡನು. ಇದನ್ನೆ ಸಂಸ್ಕೃತಿಯೆನ್ನಬಹುದು. ಮನುಷ್ಯನು ಪ್ರಕೃತಿಯ ಅಂಶವೇ ಆಗಿದ್ದಾಗ ಅದನ್ನು ನಿಯಂತ್ರಿಸುವುದಾಗಲಿ, ಉಪಯೋಗಿಸುವುದಾಗಲಿ ಅವನ ಮುಖ್ಯ ಆಸಕ್ತಿಯಾಗಿರಲಿಲ್ಲ. ಅದನ್ನು ವಿಕಾಸದ ಯಾವುದೋ ಒಂದು ಹಂತದಲ್ಲಿ ಪ್ರಕೃತಿಯಲ್ಲಿಯೇ ಪ್ರಕೃತಿಯನ್ನು ಉಪಯೋಗಿಸಿಕೊಂಡೆ ತನ್ನದೇ ಆದ ವ್ಯವಸ್ಥೆಯನ್ನು ರೂಪಿಸಿಕೊಂಡು ಜೀವಿಸಲಾರಂಭಿಸಿದನು. ಇದನ್ನೇ ಸಂಸ್ಕೃತಿಯ ಹಂತ ಎನ್ನುತ್ತೇವೆ. ಒಂದು ದೃಷ್ಟಿಯಿಂದ ಈ ರೀತಿಯಾಗಿ ಮನುಷ್ಯನು ಪ್ರಾಕೃತಿಕ ವ್ಯವಸ್ಥೆಯಿಂದ ಬಿಡಿಸಿಕೊಂಡು ರೂಪಿಸಿಕೊಂಡ ಜೀವನ ಕ್ರಮವನ್ನು ಸಂಸ್ಕೃತಿಯೆಂದೇ ಕರೆಯಬಹುದು. ಒಟ್ಟಿನಲ್ಲಿ ಸಂಸ್ಕೃತಿಯೆಂದರೆ ಒಂದು ಪ್ರದೇಶದಲ್ಲಿ ಜನ ಬದುಕುವ ರೀತಿಯೆನ್ನಬಹುದು. ಅದು ಅವರ ಜನಜೀವನಕ್ಕೆ ಸಂಬಂಧಿಸಿದ ಎಲ್ಲವನ್ನು ಒಳಗೊಳ್ಳುತ್ತದೆ. ರಾಜಕೀಯ, ಸಮಾಜ ರಚನೆ, ಆರ್ಥಿಕ ವಿಚಾರ, ನಂಬಿಕೆ, ಕಲೆ, ನೀತಿ, ಆಚರಣೆ, ಶಿಕ್ಷಣ ಹೀಗೆ ಎಲ್ಲದರ ಮೊತ್ತವನ್ನು ಸಂಸ್ಕೃತಿಯೆಂದು ಕರೆಯಬಹುದು. ಒಂದು ಪ್ರದೇಶದ ಭೌಗೋಳಿಕ ರಚನೆ, ಪ್ರಾಕೃತಿಕ ಸಂಪತ್ತು, ಹವಮಾನ ಇವೆಲ್ಲವೂ ಸಂಸ್ಕೃತಿಯ ರಚನೆಯಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ.

ಈ ಹಿನ್ನೆಲೆಯಲ್ಲಿ ಉಡುಪಿ, ದಕ್ಷಿಣ ಕನ್ನಡ ಮತ್ತು ಕಾಸರಗೋಡು ಜಿಲ್ಲೆಗಳನ್ನೊಳಗೊಂಡ ತುಳುನಾಡು ಪ್ರದೇಶವನ್ನು ಗಮನಿಸಿದರೆ ಕರ್ನಾಟಕದ ಇತರ ಭಾಗಗಳಿಗಿಂತ ವಿಭಿನ್ನವಾದ ಸಂಸ್ಕೃತಿಯನ್ನು ಇಲ್ಲಿ ಕಾಣಬಹುದಾಗಿದೆ. ಇಲ್ಲಿನ ಭೌಗೋಳಿಕ ರಚನೆ ಅಂದರೆ ಬೆಟ್ಟ ಗುಡ್ಡ, ನದಿ, ಸಮುದ್ರ, ಮಳೆ, ಇತ್ಯಾದಿ ಪ್ರಾಕೃತಿಕ ಸನ್ನಿವೇಶವು ಇಲ್ಲಿಯ ಸಂಸ್ಕೃತಿಯನ್ನು ನಿರ್ಧರಿಸಿದೆ. ಇದರಿಂದ ತುಳುನಾಡಿನ ವಿಶಿಷ್ಟ ಸಂಸ್ಕೃತಿ ರೂಪುಗೊಂಡಿದೆ.

ಭಾರತದ ಇತರ ಪ್ರದೇಶಗಳಿಗೆ ಹೋಲಿಸಿದರೆ ವಿಭಿನ್ನವಾದ ಸಾಂಸ್ಕೃತಿಕ ವಿಚಾರಗಳನ್ನು ಇಲ್ಲಿ ಗಮನಿಸಬಹುದಾಗಿದೆ. ಸಾಮಾಜಿಕ ರಚನೆಯಲ್ಲಿ ಹಲವು ಜಾತಿ, ಧರ್ಮಗಳನ್ನು ಕಾಣಬಹುದು. ಜಾತಿಯ ಶ್ರೇಣಿಕೃತ ವ್ಯವಸ್ಥೆ ತುಳುನಾಡಿನಲ್ಲಿ ವಿಶಿಷ್ಟವಾಗಿದೆ. ಬ್ರಾಹ್ಮಣೇತರರು ಎಂದರೆ ಬಂಟ, ಬಿಲ್ಲವ, ಮೊಗವೀರ, ಮ್ಯೊಲಿ, ಮಡಿವಾಳ, ಸಫಲಿಗ, ಪದ್ಮಶಾಲಿ, ಮುಂಡಾಲ, ಮನ್ಸ, ಕೊರಗ, ಮಲೆಕುಡಿಯ ಹೀಗೆ ವಿವಿಧ ಪಂಗಡಗಳಿವೆ. ಇಲ್ಲಿ ಮತ್ತೆ ಒಳ ಶ್ರೇಣೀಕೃತ ವ್ಯವಸ್ಥೆಯನ್ನು ಕಾಣುತ್ತೇವೆ. ಬಂಟರು, ಜೈನರು, ಆಳುವ ವರ್ಗವಾದರೆ ಬ್ರಾಹ್ಮಣರು ಪುರೋಹಿತ ವರ್ಗವಾಗಿದ್ದಾರೆ.

ಉಳಿದ ಜಾತಿಗಳು ಶ್ರೇಣೀಕೃತ ವ್ಯವಸ್ಥೆಯಲ್ಲಿ ನಂತರದ ಸ್ಥಾನವನ್ನು ಪಡೆಯುತ್ತಾರೆ. ಹಾಗೆಯೇ ಧರ್ಮದ ಆಧಾರದ ಮೇಲೆ ಮುಸಲ್ಮಾನರು, ಕ್ರೈಸ್ತರು ಇತ್ಯಾದಿ ಪಂಗಡಗಳನ್ನು ಗುರುತಿಸ ಬಹುದಾಗಿದೆ.

ಶ್ರೇಣೀಕೃತ ವ್ಯವಸ್ಥೆಯು ಜನರ ಸ್ಥಾನಮಾನವನ್ನು ನಿರ್ಧರಿಸುತ್ತದೆ. ಪುರೋಹಿತರಾಗಿ ಬ್ರಾಹ್ಮಣರು, ಆಳುವ ವರ್ಗವಾಗಿ ಬಂಟರು ಜೈನರನ್ನು ಮೇಲ್ವರ್ಗವೆಂದು ಗುರುತಿಸಿದರೆ, ಉಳಿದ ಜಾತಿಯ ಜನರನ್ನು ಶ್ರೇಣಿಕೃತ ವ್ಯವಸ್ಥೆಯ ಕೆಳವರ್ಗಗಳಾಗಿ ಗುರುತಿಸಬಹುದಾಗಿದೆ. ಶ್ರೇಣೀಕೃತ ವ್ಯವಸ್ಥೆಯ ಕೊನೆಯಲ್ಲಿ ಕೊರಗ, ಮುಂಡಾಲ, ಮನ್ಸ, ಮಲೆಕುಡಿಯ,ಪರವ, ಪಂಬದ ಮೊದಲಾದ ದಲಿತವರ್ಗದವರನ್ನು ಗುರುತಿಸಬಹುದಾಗಿದೆ.

ಸಹಜವಾಗಿ ಪುರೋಹಿತ ಮತ್ತು ಆಳುವ ವರ್ಗಗಳ ಕೈಯಲ್ಲಿ ಭೂಒಡೆತನ ಕೇಂದ್ರೀಕೃತವಾಗಿತ್ತು. ರಾಜಕೀಯ ಆಡಳಿತವು ಆಳುವ ವರ್ಗವಾದ ಬಂಟರು ಜೈನರಲ್ಲಿ ನೆಲೆಯಾಗಿತ್ತು. ಉಳಿದ ಜಾತಿಯ ಜನ ಕುಲಕಸುಬುಗಳನ್ನು ಮಾಡಿಕೊಂಡು ಬದುಕುತ್ತಿದ್ದರು. ಬ್ರಿಟಿಷರ ಆಳ್ವಿಕೆ ತುಳುನಾಡಿನ ರಾಜಕೀಯ ಬದುಕಿನಲ್ಲಿ ಸ್ವಲ್ಪ ಬದಲಾವಣೆಯನ್ನು ತಂದರೂ, ಸಾಮಾಜಿಕ ಸಂರಚನೆಯಲ್ಲಿ ಯಾವುದೇ ವ್ಯತ್ಯಾಸವನ್ನು ಗುರುತಿಸಲು ಸಾಧ್ಯವಿಲ್ಲ. ಬ್ರಾಹ್ಮಣ, ಬಂಟ, ಜೈನರನ್ನು ಬಿಟ್ಟರೆ ಉಳಿದ ಜಾತಿಯ ಜನರು ಸಹಜವಾಗಿಯೇ ಬಡತನ, ಶೋಷಣೆಗೆ ಒಳಗಾಗಿದ್ದರು.

ಸ್ವಾತಂತ್ರ್ಯ ಹೋರಾಟ ತುಳುನಾಡಿನ ಬದುಕಿನ ಮೇಲೆ ಸಹಜವಾಗಿಯೇ ಪರಿಣಾಮವನ್ನು ಬೀರಿತು. ಹೊಸ ಶಿಕ್ಷಣ ನೀತಿಯ ಪರಿಣಾಮವಾಗಿ ೧೮೬೮ ರಲ್ಲಿ ಮದ್ರಾಸ್ ಸರ್ಕಾರ ಶಾಲೆಯನ್ನು ಸ್ಥಾಪಿಸಿತು. ೧೮೮೦ರಲ್ಲಿ ಜೆಸ್ವಿಟ್‌ಪಾದ್ರಿಗಳು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದರು. ಇದರಿಂದ ತುಳುನಾಡಿನಲ್ಲಿ ಶಿಕ್ಷಣವನ್ನು ಪಡೆದ ಜನವರ್ಗವೊಂದು ತಲೆಯೆತ್ತತೊಡಗಿತು. ಇದರಿಂದ ಆಧುನಿಕತೆಯ ಪ್ರವೇಶ ಆರಂಭವಾಯಿತು. ಸ್ವಾತಂತ್ರ್ಯ ಚಳುವಳಿ ದೇಶದಲ್ಲಿ ನಡೆದಂತೆ ತುಳುನಾಡಿನಲ್ಲೂ ಪ್ರಭಾವ ಬೀರಲಾರಂಭಿಸಿತು. ಇದರಿಂದ ಸಾಮಾಜಿಕ ಸಂರಚನೆಯಲ್ಲಿ ಪರಿವರ್ತನೆಯನ್ನು ಕಾಣಲು ಸಾಧ್ಯವಾಯಿತು. ಈ ಪ್ರಭಾವ ತೀಕ್ಷ್ಣವಾಗಿ ಅಲ್ಲವಾದರೂ ಪ್ರಗತಿಪರ ಚಿಂತನೆಗಳನ್ನು ಹುಟ್ಟಿಸುವಲ್ಲಿ ಸಫಲವಾಯಿತು.

ತುಳುನಾಡಿನ ಮೇಲೆ ಗಾಂಧೀಜಿಯವರ ಪ್ರಭಾವ ಇಲ್ಲಿಯ ಬದುಕಿನಲ್ಲಿ ಮಹತ್ವದ ಬದಲಾವಣೆಯನ್ನು ತಂದಿತು. ಗಾಂಧಿ ಪ್ರಭಾವಕ್ಕೆ ಒಳಗಾದ ಹಲವು ಯುವಕರು ಸಾಮಾಜಿಕ ಬದಲಾವಣೆಗೆ ಪ್ರಯತ್ನಿಸಿದರು. ಕುದ್ಮಲ್‌ರಂಗರಾವ್, ಕಾರ್ನಾಡ್ ಸದಾಶಿವರಾವ್ ಮೊದಲಾದವರು ಗಾಂಧಿ ಚಿಂತನೆಗಳಿಂದ ಪ್ರೇರಣೆಯನ್ನು ಪಡೆದು ಸಾಮಾಜಿಕ ಸುಧಾರಣೆಯನ್ನು ಆರಂಭಿಸಿದರು. ಅಸ್ಪ್ರಶ್ಯತಾ ನಿವಾರಣೆ, ಸ್ತ್ರೀ ಶಿಕ್ಷಣ, ಬಾಲ್ಯವಿವಾಹ, ವಿಧವಾ ವಿವಾಹ ಪ್ರೋತ್ಸಾಹ ಇತ್ಯಾದಿ

ಪ್ರಗತಿಪರ ಗಾಂಧಿ ಚಿಂತನೆಗಳನ್ನು ಜಾರಿಗೆ ತರಲು ಪ್ರಯತ್ನಿಸಿದರು. ಒಂದು ರೀತಿಯಲ್ಲಿ ಈ ಚಿಂತನೆಗಳಲ್ಲಿ ತುಳುನಾಡಿನ ಬದುಕಿನಲ್ಲಿ ಮಹತ್ವದ ಬದಲಾವಣೆಗಳನ್ನು ತರಲಾರಂಭಿಸಿತು. ಇದಕ್ಕೆ ಪೂರಕವಾಗಿ ಆಧುನಿಕ ಕೈಗಾರಿಕೆಗಳು ತುಳುನಾಡನ್ನು ಪ್ರವೇಶಿಸಿದವು. ಸಹಜವಾಗಿ ಕೈಗಾರೀಕರಣದ ಚಿಂತನೆಗಳು ತುಳುನಾಡಿನ ಜನಜೀವನದ ಮೇಲೆ ಪ್ರಭಾವ ಬೀರಿದವು.

ಸ್ತ್ರೀ ಸಮಾನತೆ ಮತ್ತು ವಿಮೋಚನೆಗೆ ಸಂಬಂಧಿಸಿದಂತೆ ನಡೆದ ಕಾರ್ಯಕ್ರಮಗಳು ಹೆಚ್ಚು ಪ್ರಭಾವ ಬೀರಲು ಮುಖ್ಯ ಕಾರಣಗಳನ್ನು ತುಳುನಾಡಿನ ಸಾಮಾಜಿಕ ಸಂರಚನೆಯಲ್ಲಿ ಗುರುತಿಸಬಹುದಾಗಿದೆ. ಬ್ರಾಹ್ಮಣೇತರ ವರ್ಗಗಳಲ್ಲಿ **'ಅಳಿಯಕಟ್ಟು'** ಎಂದು ಕರೆಯಲ್ಪಡುವ ಮಾತೃ ಪ್ರಧಾನ ಕುಟುಂಬ ವ್ಯವಸ್ಥೆ ತುಳುನಾಡಿನಲ್ಲಿತ್ತು. ಆಸ್ತಿಯ ಹಕ್ಕು ಹೆಣ್ಣು ಮಕ್ಕಳಿಗೆ ದೊರೆಯುವುದು ಅಳಿಯ ಕಟ್ಟಿನ ಮುಖ್ಯ ಲಕ್ಷಣವಾಗಿತ್ತು. ಇದರಿಂದ ಸಹಜವಾಗಿಯೇ ಸ್ತ್ರೀಪರ ಚಿಂತನೆಗಳು ತುಳು ನಾಡಿನಲ್ಲಿ ಸುಲಭವಾಗಿ ಅನುಷ್ಠಾನಗೊಳ್ಳಲು ಸಾಧ್ಯವಾಯಿತು.

ಈ ಮೇಲಿನ ವಿಶ್ಲೇಷಣೆಯ ಹಿನ್ನೆಲೆಯಲ್ಲಿ **'ಗಾಂಧಿ ಬಂದ'** ಕಾದಂಬರಿಯನ್ನು ಚರ್ಚಿಸ ಬಹುದಾಗಿದೆ. ಸ್ವಾತಂತ್ರ್ಯ ಹೋರಾಟ ನಡೆಯುವ ಸಂದರ್ಭದಲ್ಲಿ ತುಳುನಾಡಿನಲ್ಲಿ ನಡೆದ ಸಾಂಸ್ಕೃತಿಕ ಪರಿವರ್ತನೆಯು ಕಾದಂಬರಿಯ ಮುಖ್ಯ ವಸ್ತುವಾಗಿದೆ. ಗಾಂಧಿಯ ಬರುವಿಕೆಯನ್ನು ತಂತ್ರವಾಗಿ ಬಳಸಿಕೊಂಡು ಕಾದಂಬರಿಯು ಇಲ್ಲಿ ನಡೆದ ಸಾಂಸ್ಕೃತಿಕ ಪರಿವರ್ತನೆಯನ್ನು ದಾಖಲಿಸುತ್ತದೆ.

ಈ ಸಂಸ್ಕೃತಿಯ ಪರಿವರ್ತನೆಯ ಪರಿಣಾಮವಾಗಿ ನಡೆಯುವ ಸಾಮಾಜಿಕ ಸಂಘರ್ಷ ಹಾಗೂ ಈ ಸಾಮಾಜಿಕ ಸಂಘರ್ಷ ತುಳುನಾಡಿನ ಬದುಕನ್ನು ಸಾಮರಸ್ಯದೆಡೆಗೆ ಒಯ್ಯುವ ವಿಶಿಷ್ಟ ಕಥಾನಕ ಕಾದಂಬರಿಯಲ್ಲಿದೆ. ಅದರ ಕೆಲವು ಸನ್ನಿವೇಶಗಳನ್ನು ಹೀಗೆ ವಿವರಿಸಬಹುದು.

### 1. ಶ್ರೇಣೀಕೃತ ವ್ಯವಸ್ಥೆಯಲ್ಲಿ ಪರಿವರ್ತನೆ

ತುಳುನಾಡಿನ ಮಹತ್ವದ ಪ್ರಕೃತಿ ಸಂಬಂಧಿ ಆಚರಣೆಗಳಲ್ಲಿ ಒಂದಾದ ಕಂಬಳದಿಂದ ಕಾದಂಬರಿ ಆರಂಭಗೊಳ್ಳುತ್ತದೆ. ಕಂಬಳವು ಪ್ರಕೃತಿ ಆರಾಧನೆಗೆ ಸಂಬಂಧಿಸಿದ ಆಚರಣೆಯಾದರೂ , ಜಮೀನ್ದಾರಿ ವ್ಯವಸ್ಥೆಯ ಪಳಯುಳಿಕೆಯನ್ನು ತನ್ನ ಒಡಲಲ್ಲಿ ಇಟ್ಟುಕೊಂಡ ಒಂದು ಸಾಂಸ್ಕೃತಿಕ ಆಚರಣೆ. ತುಳುನಾಡಿನ ಜಾತಿವ್ಯವಸ್ಥೆಯಲ್ಲಿರುವ ಅಸಮಾನತೆ ಮತ್ತು ಶೋಷಣೆಯ ರೂಪಕವಾಗಿ ಕಂಬಳವನ್ನು ಕಾದಂಬರಿಯಲ್ಲಿ ಬಳಸಲಾಗಿದೆ. ಕಂಬಳದಲ್ಲಿ ಕೊರಗರ ಪಾಲ್ಗೊಳ್ಳುವಿಕೆಯನ್ನು ಹೀಗೆ ಚಿತ್ರಿಸಬಹುದು.

ಕಂಬುಲದಲ್ಲಿ 'ತನಿಕೊಲ್ಲನು' ಒಂದು ವಿಶಿಷ್ಟ ಆಚರಣೆ. ಕಂಬುಲದ ಹಿಂದಿನ ದಿನ ರಾತ್ರಿ ಕಂಬುಲದ ಗದ್ದೆಯ 'ಮಂಜೊಟ್ಟಿ'ಯ[1] ಹತ್ತಿರ ಕೊರಗರು ಬರುತ್ತಾರೆ. ರಾತ್ರಿಯಿಡೀ ಜಾಗರಣೆಯಲ್ಲಿರುತ್ತಾರೆ. ಇಡೀ ರಾತ್ರಿ ಡೋಲು ನಲಿಕೆಯಲ್ಲಿ ಕುಣಿಯುತ್ತಾರೆ. ಕೃತಕ ಸಾಂಕೇತಿಕ ಲೈಂಗಿಕ ಹಾವ-ಭಾವಗಳನ್ನು ಪ್ರದರ್ಶಿಸುತ್ತಾರೆ. ಕಂಬುಲದ ಯಜಮಾನನಿಂದ ಪಡಿಯನ್ನು ಪಡೆಯುತ್ತಾರೆ. ಬೆಳಗ್ಗೆ

ಕೋಣಗಳ ರೀತಿಯಲ್ಲಿ ಕೊರಗರನ್ನು ಓಡಿಸುವ ಸಾಂಕೇತಿಕ ಆಚರಣೆ ನಡೆಯುತ್ತದೆ. ಈ ರೀತಿ ಕೊರಗರನ್ನು ಕೋಣಗಳಿಗೆ ಸಮಾನವಾಗಿ ಸಾಂಕೇತಿಕವಾಗಿ ಬಳಸಿಕೊಳ್ಳುವ ಈ ಆಚರಣೆ ತುಳುನಾಡಿನಲ್ಲಿ ದಲಿತರ ಸ್ಥಿತಿಯನ್ನು ಸಂಕೇತಿಸುತ್ತದೆ. ಈ ದೃಷ್ಟಿಯಿಂದಲೇ ಕಾದಂಬರಿಯಲ್ಲಿ ಈ ಸನ್ನಿವೇಶಗಳು ಗಾಂಧಿಯ ಬರುವಿಕೆ ತುಳುನಾಡಿನ ಬ್ರಾಹ್ಮಣೇತರಲ್ಲಿ ಅಸ್ಪ್ರಶ್ಯತೆ ಮತ್ತು ಶೋಷಣೆಯ ಕುರಿತಾದ ಅರಿವನ್ನು ಮೂಡಿಸುವಲ್ಲಿ ಸಫಲವಾಗುತ್ತದೆ.

ಕಾರ್ನಾಡರಂತವರು ಅಸ್ಪೃಶ್ಯತೆಯ ವಿರುದ್ಧ ಧ್ವನಿಯೆತ್ತುತ್ತಾರೆ. ಇದು ದಲಿತರಲ್ಲೂ ಅರಿವನ್ನು ಮೂಡಿಸುತ್ತದೆ. ಜಾತಿಯ ಕುರಿತಾದ ಗಾಂಧೀಜಿಯ ಪರಿಕಲ್ಪನೆ ದಲಿತರ ಮನಸ್ಸನ್ನು ಮುಟ್ಟಿರುವುದನ್ನು ಕಾದಂಬರಿಯು ಖಚಿತಪಡಿಸುತ್ತದೆ. ಇದರಿಂದಲೇ ಮುಂದೆ ಕೊರಗರು ಕಂಬುಲದಲ್ಲಿ ಭಾಗವಹಿಸಲು ನಿರಾಕರಿಸುತ್ತಾರೆ. ಅಜಲು ಪದ್ಧತಿಯನ್ನು ವಿರೋಧಿಸುತ್ತಾರೆ. ಕಾದಂಬರಿಯ ಮೊದಲ ಅಧ್ಯಾಯದಲ್ಲಿ ಕೋಣ ಓಡಿಸುವ ಕೂಸ ಮ್ಯೊಲಿಯ ಯೋಚನೆ ಹೀಗೆ ವ್ಯಕ್ತವಾಗಿದೆ. ಯಜಮಾನರು ಕೋಣಗಳನ್ನು ಪ್ರೀತಿಸುವ ಮತ್ತು ಅವುಗಳಿಗೆ ಪೌಷ್ಠಿಕ ಆಹಾರ ನೀಡುವುದನ್ನು ಕಂಡು ಕೋಣ ಓಡಿಸುವ ಕೂಸ ಮ್ಯೊಲಿ ಹೀಗೆ ಯೋಚಿಸುತ್ತಾನೆ " . . . . . . . . .. .... ಕೋಣಗಳ ಈ ಪರಿಯ ಉಣ್ಣುವ ಭಾಗ್ಯ ಕಂಡು ಸ್ವತ: ಕೂಸ ಮ್ಯೊಲಿಯೇ ಅದೆಷ್ಟೋ ಸಲ ಕರುಬಿದ್ದಾನೆ. ಇವತ್ತು ಗಂಜಿ ಕುಡಿದರೆ ನಾಳೆಗಿಲ್ಲದ ದಿನಗಳನ್ನು ದೂಡುತ್ತಿರುವ ಆತ ತಾನು ಕೋಣನಾಗಬಾರದಿತ್ತೆ ಎಂದು ಎಷ್ಟೋ ಬಾರಿ ಹಲುಬಿದ್ದಿದೆ. .. .. .. . . ." ('ಗಾಂಧಿ ಬಂದ' ಪು.ಸಂ. ೧೩.) ಎಂಬಲ್ಲಿ ದಲಿತರ ಬದುಕಿನ ಸ್ಥಿತಿಯನ್ನು ಚಿತ್ರಿಸಲಾಗಿದೆ. ಶೂದ್ರವರ್ಗಕ್ಕೆ ಸೇರಿದ ಕೂಸ ಮ್ಯೊಲಿ ದಲಿತನಲ್ಲದಿದ್ದರೂ ಬಡತನದ ಭಯಾನಕ ಸ್ಥಿತಿಯನ್ನು ಅನುಭವಿಸುತ್ತಾನೆ. ಅವನು ಕೋಣಗಳನ್ನು ಓಡಿಸಿದರೆ ದಲಿತರಾದ ಕೊರಗರು ಸ್ವತ: ಕೋಣಗಳಾಗಿ ಬಿಡುತ್ತಾರೆ.

ಗಾಂಧಿಯ ಬರುವಿಕೆ ಕೊರಗರಲ್ಲಿ ಹೊಸ ಪ್ರಜ್ಞೆಯನ್ನು ಮೂಡಿಸಿದೆ. ಅವರು ಕ್ರಮೇಣ ಕಂಬಳದ ಆಚರಣೆಯಿಂದ ಕಳಚಿಕೊಳ್ಳುವುದನ್ನು ಗುರುತಿಸಬಹುದಾಗಿದೆ. ಗಾಂಧಿಯ ಆಗಮನ ತುಳುನಾಡಿನ ಶ್ರೇಣೀಕೃತ ವ್ಯವಸ್ಥೆಯ ಮೇಲೆ ಬಲವಾದ ಪೆಟ್ಟನ್ನು ನೀಡಿರುವುದನ್ನು ಕಾದಂಬರಿಯ ಇಂತಹ ಸನ್ನಿವೇಶಗಳು ಖಚಿತಪಡಿಸುತ್ತವೆ. ಕಾದಂಬರಿ ಹೊಂದಿದ ಪ್ರಗತಿಪರ ದೃಷ್ಟಿಕೋನಕ್ಕೆ ಇದು ಸಾಕ್ಷಿಯಾಗಿದೆ. ಅದು ಕೇವಲ ಗಾಂಧಿಯ ಆಗಮನ ಮಾತ್ರ ಆಗದೆ, ತುಳುನಾಡಿನ ಸಾಮಾಜಿಕ ರಚನೆಯಲ್ಲಿ ಹೊಸತನದ ಆಗಮನವು ಆಗುತ್ತದೆ. ಆಳುಮಕ್ಕಳು ಮುಟ್ಟಿಸಿಕೊಳ್ಳಬಾರದ ಸಾಮಾಜಿಕ ಸ್ಥಿತಿ ಮೀರಿ ಜೊತೆಯಲ್ಲಿ ಸೇರುವ, ಸನ್ನಿವೇಶಗಳನ್ನು ಸೃಷ್ಟಿ ಮಾಡಿತು. ನೀರು ಮಜ್ಜಿಗೆಯನ್ನು ಕುಡಿಯಲು ಬೊಗಸೆಯೊಡ್ಡಿ ಬೇಡುವ ಕ್ರಮ ಬದಲಾಯಿತು. ಊಟ ಮಾಡಲು ಅಂಗಳದಲ್ಲಿ ಉಳಿದುಕೊಳ್ಳುವ ಸ್ಥಿತಿಯಲ್ಲಿ ಪರಿವರ್ತನೆಯಾಯಿತು. ಊಟ ಮಾಡಲು ಕುಳಿತ ಸ್ಥಳಕ್ಕೆ ಸೆಗಣಿ ಸಾರಿಸಿ ಹೋಗಬೇಕಾದ ಸ್ಥಿತಿಯನ್ನು ವಿರೋಧಿಸಿದರು. ಗಾಂಧಿ ಮೌಲ್ಯವನ್ನು ಅಳವಡಿಸಿಕೊಂಡು ಸಾಮಾಜಿಕ, ಶೈಕ್ಷಣಿಕ, ರಾಜಕೀಯ, ಸಾಂಸ್ಕೃತಿಕ ನೆಲೆಗಳಲ್ಲಿ ಸ್ಥಾನವನ್ನು ಪಡೆದರು. ಇದನ್ನು ಸಾಮಾಜಿಕ

ಸಂಘರ್ಷದಿಂದ ಗುರುತಿಸಲು ಸಾಧ್ಯವಾಗುತ್ತದೆ. ಆಳುವ ವರ್ಗವಾದ ಬಂಟರು –ಅಸ್ಪೃಶ್ಯರು ಒಂದಾಗಿ ಬ್ರಾಹ್ಮಣರ ಕಂದಾಚಾರಗಳ ವಿರುದ್ಧ ಹೋರಾಡುತ್ತಾರೆ. ಬ್ರಾಹ್ಮಣರು ಮೇಲ್ಜಾತಿಯ ಪ್ರತಿನಿಧಿಗಳಾದರೆ, ಜಾತಿಯ ನೆಲೆಯಿಂದ ಬಂಟರು ಶೂದ್ರ ವರ್ಗಕ್ಕೆ ಸೇರಿದವರಾಗಿದ್ದಾರೆ. ಈ ನೆಲೆಗಳಿಂದಲೂ ಇವರಲ್ಲಿ ಅನ್ಯೋನ್ಯತೆಯನ್ನು ಗುರುತಿಸಲು ಸಾಧ್ಯವಾಯಿತು.

2. <u>ಧಾರ್ಮಿಕ ಸ್ವರೂಪದಲ್ಲಿ ಬದಲಾವಣೆ:</u>

ಕಾದಂಬರಿಯಲ್ಲಿ ಅದ್ರಾಮ–ದ್ರೌಪದಿಯವರ ಮದುವೆ ಧಾರ್ಮಿಕ ಸಂಘರ್ಷವನ್ನು ನಿರ್ಮಿಸುತ್ತದೆ. ಮೇಲ್ಜಾತಿಯ ಬ್ರಾಹ್ಮಣರಿಂದ ತೊಂದರೆಯಾದಾಗ ತುಳುನಾಡಿನ ಬಂಟರು ಅದ್ರಾಮ– ದ್ರೌಪದಿಯರ ಮದುವೆ ಮಾಡಿಸಿ ಬ್ರಾಹ್ಮಣರ ವಿರುದ್ಧ ಸೇಡು ತೀರಿಸಿಕೊಳ್ಳುತ್ತಾರೆ. ದ್ರೌಪದಿಯು ವಿಧವೆಯಾಗಿದ್ದಾಳೆ.

"............... ದ್ರೌಪದಿಯ ಇಡೀಯ ಬದುಕೇ ಕವಚಿಬಿದ್ದು ಮುಚ್ಚಿ ಹೋದಂತಾಗಿದೆ. ಯಾವ ಗೌಜಿಯಾಕೆ? ಯಾವಗಮ್ಮತ್ತ್ಯಾಕೆ? ಎಂದು ನಿಂತಲ್ಲೇ ನಿಂತು ಬಿಡುತ್ತಾಳೆ, ನೋಡಿದನ್ನೇ ನೋಡುತ್ತಿರುತ್ತಾಳೆ.....! ಧರ್ಮ ಸೂಕ್ಷ್ಮಜ್ಞರಾದ ಹೆಬ್ಬಾರರು ಮಗಳ ಬದುಕು ಬೋಳಾದೊಡನೆ, ಧರ್ಮವಿರೋಧಿಯಾಗಿರದೆ ಆಕೆಯ ವಿರೋಧ ಬಿಕ್ಕಳಿಕೆಗಳ ನಡುವೆ ಆಕೆಯ ತಲೆಯನ್ನೇನೋ ಬೋಳಿಸಿದರು. . . .." ('ಗಾಂಧಿ ಬಂದ' ಪು. ಸಂ. ೯). ದ್ರೌಪದಿಯು ಧರ್ಮ ಸಂಘರ್ಷದಲ್ಲಿ ಸಿಕ್ಕಿದ್ದಾಳೆ. ಎಳೆವಯಸ್ಸಿನ ಆಕೆಯ ಕನಸುಗಳು ನಲುಗುತ್ತಿವೆ. ತಂದೆಯ ಧರ್ಮಶಾಸ್ತ್ರವು ಆಕೆಯನ್ನು ನಿಯಂತ್ರಿಸಿದೆ. ತಂದೆಯಾದ ಹೆಬ್ಬಾರರು ಮಗಳ ಮನಸ್ಸನ್ನು ಅರ್ಥ ಮಾಡಿಕೊಳ್ಳುವುದಿಲ್ಲ. ಸುರಗಿ ಮಠದ ಧರ್ಮವು ಆಕೆಯ ನೈಸರ್ಗಿಕ ಆಸೆ– ಕನಸುಗಳನ್ನು ಕಿತ್ತುಕೊಂಡಿದೆ. ದ್ರೌಪದಿಯ ಬದುಕು ಒತ್ತಡಗಳ ಒಳಗೆ ಸೇರಿಹೋಗಿದೆ. ಕಳೆದ ಕಂಬಳದಲ್ಲಿ ಮದುವೆಯಾದ ದ್ರೌಪದಿಯು ಮುಂದಿನ ಕಂಬಳದಲ್ಲಿ ವಿಧವೆಯಾಗಿದ್ದಾಳೆ.

ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಹುಟ್ಟಿದ ದ್ರೌಪದಿಯು ಕುಟುಂಬದೊಳಗೆ ಯಾವುದೇ ಸ್ವಾತಂತ್ರ್ಯ ಪಡೆದುಕೊಂಡಿಲ್ಲ. ಕಂಬಳದ ಕೋಣಗಳಿಗೂ ಇವಳಿಗೂ ವ್ಯತ್ಯಾಸಗಳಿಲ್ಲದ ಬದುಕು ನಿರ್ಮಾಣವಾಗಿದೆ. ". . . . . . ಈ ಕೋಣಗಳ ಸಿಂಗಾರವೆಲ್ಲ ಎಲ್ಲಿಯವರೆಗೆ ಮುತ್ತೈದೆತನ ಕಳಚಿಕೊಂಡು, ಮುಂಡೆತನ ಬಾಚಿಕೊಂಡೊಡನೆ ತನ್ನ ಸಿಂಗಾರವೆಲ್ಲ ನೆರೆಯ ನೀರು ಇಳಿದು ಹೋದಂತೆ ಸರ್ರನೆ ಇಳಿದು ಹೋಗಲಿಲ್ಲವೆ? .. . . .. . . . . . . . " ('ಗಾಂಧಿ ಬಂದ' ಪು.ಸಂ. ೧೧) ಎಂದು ದ್ರೌಪದಿಯು ಯೋಚಿಸುತ್ತಾಳೆ. ಹಿಂದೆ ಸಂಸ್ಕೃತಿಯಲ್ಲಿ ಹೆಣ್ಣು ಪಡೆದುಕೊಂಡ ಸ್ಥಾನ ನಿಕೃಷ್ಟವಾದುದು. ಅವಳ ಬದುಕನ್ನು ಧರ್ಮ ನಿಯಂತ್ರಿಸುತ್ತಿತ್ತು. ತನ್ನ ವಿಧವಾ ಜೀವನದ ಜೀವನ ಸ್ಥಿತಿಯ ಬಗ್ಗೆ ಖೇದವಾಗುತ್ತದೆ. ಇವಳ ಬದುಕಿನಲ್ಲಿ ಬಾಲ್ಯದ ಗೆಳೆಯನಾಗಿ ಮುಸ್ಲಿಂ ಅದ್ರಾಮನ

ಪರಸ್ಪರ ದೃಷ್ಟಿಯಲ್ಲಿ ಏನಿತ್ತೋ . . . . ಏನಿಲ್ಲವೋ ! ಎಲ್ಲವೂ ಇತ್ತು!...." ('ಗಾಂಧಿ ಬಂದ' ಪು.ಸಂ ೧೭) ಇವರ ಜೀವನದ ಮಧ್ಯೆ ದ್ರೌಪದಿಯ ತಂದೆ ಹೆಬ್ಬಾರರು ಅಡ್ಡ ಗೋಡೆಯಾಗಿದ್ದರು. ಸಂಗಾತಿ ಬೇಕೆಂಬ ಬಯಕೆಯೇ ಈಕೆಯ ಜೀವನದಲ್ಲಿ ಸಂಘರ್ಷವನ್ನು ಉಂಟುಮಾಡಿದವು. ಬಂಟರ ಪೂರ್ತಿ ಸಹಕಾರದಿಂದ ಎರಡು ಎಳೆ ಜೀವಗಳು ಮದುವೆಯಲ್ಲಿ ಒಂದಾದರು.

ಇವರ ಪ್ರೀತಿಗೆ ಬಂಟರ ಮತ್ತು ಅಸ್ಪ್ರಶ್ಯರ ಸಹಕಾರ ಮತ್ತು ಪ್ರೀತಿ ದೊರೆಯಿತು. ದ್ರೌಪದಿಗೆ ಕೇಶ ಮುಂಡನವನ್ನು ಹೆಬ್ಬಾರರು ಮಾಡಿಸುತ್ತಾರೆ. ಇದು ಧರ್ಮದ ಭಾಗವಾಗಿ ಬರುತ್ತದೆ. ಅದ್ರಾಮನ ದಿನ ನಿತ್ಯದ ಮಾತುಕತೆ ಹೆಬ್ಬಾರರನ್ನು ತೊಂದರೆಗೆ ಸಿಲುಕಿಸಿದೆ. ". . . . . . . ನಮ್ಮ ಮನೆ ಬೇಲಿಗಟ್ಟಿ ಮಾಡುದೇ ಸಮ. . . .. . . . ." (ಗಾಂಧಿ ಬಂದ ಪು.ಸಂ. ೨೨) ಎಂಬ ತೀರ್ಮಾನದಲ್ಲಿ ತಮ್ಮ ಧರ್ಮ ಆಚಾರ –ಸಂಪ್ರದಾಯಗಳ ನೆಲೆಯಲ್ಲಿ ದ್ರೌಪದಿಯ ಬದುಕು ಪ್ರವೇಶವನ್ನು ಪಡೆದುಕೊಳ್ಳುತ್ತದೆ. ತಂದೆಯಾದವನ ಜವಾಬ್ದಾರಿಯು ಇಲ್ಲಿ ಸೋಲುತ್ತದೆ.

ಬಯಲಾಟದ ಹಾಸ್ಯಗಾರನ ಪಾತ್ರದಂತೆ ಹೆಬ್ಬಾರರ ಚಿಂತೆಗಳನ್ನು ಹೆಚ್ಚು ಮಾಡಲು ಅದ್ರಾಮನ ಪ್ರವೇಶವಾಗಿದೆ. ಇವರ ಚಿಂತೆಗಳ ಭಾರ ಹೆಚ್ಚಾಗಿದೆ. ಸುರಗಿ ಮಠದ ಧರ್ಮ ರಕ್ಷಣೆಯ ಜವಾಬ್ದಾರಿಯನ್ನು ಇವರು ಹೊತ್ತುಕೊಂಡಿದ್ದಾರೆ. ಇಲ್ಲಿ ಧರ್ಮ ಮೇಲ್ಗೈ ಪಡೆಯುತ್ತದೆ. ". . . . . ದ್ರೌಪದಿಯ ಕೊರಡಾಗಿರುವ ಜೀವಂತಿಕೆ, ದೃಢತೆ, ಬಲ ನೀಡಿ ಮತ್ತೆ ಚಿಗುರಿಸಬೇಕೆನ್ನುವ ಹಠದಿಂದ ಅದ್ರಾಮ, ಹಿಂದೂ ಪರಂಪರೆಯ ಮೌಲ್ಯಗಳಲ್ಲಿರುವ ಮೌಢ್ಯತೆಯನ್ನು, ಕುಟಿಲತೆಯನ್ನು ರಾಕ್ಷಸಿ ಗುಣವನ್ನು ಒಂದೊಂದಾಗಿಯೆ ಬಾಳೆದಿಂಡಿನ ಪದರ ಕಳಚಿದಂತೆ ಪದರ ಪದರವಾಗಿ ಕಳಚಿಟ್ಟು ಆಕೆಯ ಮನೊಕ್ಕೊಪ್ಪುವಂತೆ ವಿಶ್ಲೇಷಿಸುತ್ತಾ ಧರ್ಮದ ಒಟ್ಟಾರೆ ತಿರುಳೇನೆಂಬುದನ್ನು ಆಕೆಯೆದುರು ತೆರೆದಿಡಲು ಪ್ರಯತ್ನಿಸಿದ . . ." ('ಗಾಂಧಿ ಬಂದ' ಪು. ಸಂ. ೪೫) ಹಿಂದೂ ಸಮಾಜವು ಹೆಣ್ಣಿಗೆ ಹೆಣ್ತನವನ್ನು ಮೊದಲು ನೀಡುತ್ತದೆ. ಕೌಮಾರ್ಯಕ್ಕೆ ಬಂದಾಗ ಬಳೆಬೊಟ್ಟುಗಳನ್ನು ನೀಡುತ್ತದೆ. ಅದೇ, ಬಳೆ ಬೊಟ್ಟುಗಳು ಮಂಗಲ ಕಾರ್ಯಗಳಲ್ಲಿ ಮುತ್ತೈದೆ ಸ್ಥಾನದ ಸಂಕೇತಗಳಾಗಿ ಆಕೆಗೆ ದೊರೆಯುತ್ತದೆ. ಮದುವೆಯ ಜೊತೆಗೆ ತಾಳಿಭಾಗ್ಯವೂ ಸಿಗುತ್ತದೆ. ಯಾವುದೋ ಸಂದರ್ಭದಲ್ಲಿ ಹೆಣ್ಣು ಗಂಡನನ್ನು ಕಳೆದುಕೊಂಡರೆ ಸಮಾಜ ವಿಧವೆ ಸ್ಥಾನ ನೀಡುತ್ತದೆ. ಕೇಶ ಮುಂಡನ ಮಾಡಿಕೊಂಡು, ಕತ್ತಲೆ ಕೋಣೆಯ ಒಳಗೆ ಸೇರಿ ಹೋಗುವ ಸಾಮಾಜಿಕ ಸಂದರ್ಭ ಇತ್ತೆಂಬುದನ್ನು ಕಾದಂಬರಿ ತಿಳಿಸುತ್ತದೆ. ಇಂತಹ ಸನ್ನಿವೇಶದಲ್ಲಿ ಹೆಣ್ಣು ಭಾವನೆಗಳಿಲ್ಲದ ಬಂಡೆಗಲ್ಲಾಗಿ ಬದುಕಬೇಕಾದ ಅನಿವಾರ್ಯತೆ ಇತ್ತು. ಇದು ಸರಿಯಲ್ಲ. ಇದು ಸ್ವಾತಂತ್ರ್ಯಕ್ಕೆ ಧಕ್ಕೆ ತರುವಂತಹದು. ಬದುಕು ನಮ್ಮ ಸ್ವಂತದು ಎಂಬ ಅರಿವನ್ನು ದ್ರೌಪದಿಗೆ ಅದ್ರಾಮ ತಿಳಿಸುತ್ತಾನೆ. ಹೀಗೆ ಸ್ಥಗಿತವಾದ ಜೀವನ ಶೈಲಿಯನ್ನು ಮುರಿಯಲಾಗಿದೆ. ಧರ್ಮಸೂಕ್ಷ್ಮದ ದೋಷಗಳನ್ನು ಬಯಲು ಮಾಡಲಾಗಿದೆ. ಹೀಗೆ ಈ ಸಂಘರ್ಷಗಳು ಎರಡು ಜಾತಿ ಧರ್ಮಗಳ ಮಧ್ಯೆ ಮುಂದುವರಿಯುತ್ತದೆ. ಧರ್ಮ ಒಡೆದು ಆಳುವಂತಹದಲ್ಲ. ಧರ್ಮವು ಕಟ್ಟುವ ಕೆಲಸವನ್ನು ಮಾಡಬೇಕಾಗಿದೆ ಎಂಬ ಸತ್ಯ ಅದ್ರಾಮನಿಗೆ ತಿಳಿದಿತ್ತು. ಅದನ್ನು ಬಹಳ ಚೆನ್ನಾಗಿ ದ್ರೌಪದಿಗೆ ತಿಳಿಸುತ್ತಾನೆ.

ಧರ್ಮವು ಇಲ್ಲಿ ಸರ್ವಾಧಿಕಾರವನ್ನು ಮೆರೆಯುತ್ತದೆ. ಹಿಂದೂ ಧರ್ಮದ ಮೌಢ್ಯಗಳನ್ನು ಪಾಲಿಸುವುದು ದ್ರೌಪದಿಗೆ ಕಷ್ಟವಾಗುತ್ತಿದೆ. ಧರ್ಮ ಶಾಸ್ತ್ರಗಳನ್ನು ಧಿಕ್ಕರಿಸಿದರೆ ಅವರಿಗೆ ಮರಣವೇ ಲೇಸೆಂದು ತಿಳಿದವರು ಹೆಬ್ಬಾರರು. ಇದನ್ನೆಲ್ಲಾ ಅನುಸರಿಸುವುದು ತನಗೆ ಇಷ್ಟವಿಲ್ಲವೆಂದು ದ್ರೌಪದಿ ತಿಳಿದಿದ್ದಾಳೆ. ಹೀಗೆ ಧರ್ಮದ ಒಳಗಡೆಯೇ ಸಂಘರ್ಷ ನಿರ್ಮಾಣವಾಗುತ್ತವೆ.

ಧರ್ಮದ ಒಳಗಡೆ ದ್ರೌಪದಿಯನ್ನು ಕೇವಲ ತಂದೆ ಮಾತ್ರ ಆಳುವುದಲ್ಲ. ತಾಯಿ ರುಕುಣಿಯಮ್ಮರು ಅಧಿಕಾರವನ್ನು ಚಲಾಯಿಸುತ್ತಾರೆ. "ರುಕುಣಿಯಮ್ಮ ಮಗಳನ್ನು ಹಿಂಸಿಸುತ್ತಿದ್ದಾರೆಂದಲ್ಲ. ಸಾಂಪ್ರದಾಯಿಕ ಬದುಕಿನಲ್ಲಿ ಮಮತೆ-ವಾತ್ಸಲ್ಯ ಎಂಬುದು ತಾವು ನಂಬಿಕೊಂಡು ಬಂದಿರುವ ಆಚಾರ-ವಿಚಾರ-ಕಟ್ಟಳೆ, ರೀತಿ-ನೀತಿಗಳ ಮಿತಿಯಲ್ಲಿ ಸರಿಯಬೇಕು ಎಂಬುದು ಅವರ ನಿಲುವು. ಅದಕ್ಕಾಗಿ ಮಾನವೀಯತೆಯನ್ನು ಬೇಕಾದರೂ ಅಡವಿಟ್ಟರೂ ಆಕೆ..." ('ಗಾಂಧಿ ಬಂದ' ಪು. ಸಂ. ೪೭) ಧರ್ಮವನ್ನು ರುಕುಣಿಯಮ್ಮ ಅನ್ನನೀರೆಂದು ನಂಬಿದವರು. ಮುತ್ತೈದೆತನವನ್ನು ಜೀವನದ ಸರ್ವಸ್ವ ಎಂದು ನಂಬಿದವರು. ರುಕುಣಿಯಮ್ಮನ ಮುಂದಿರುವ ಸಮಾಜವನ್ನು ಸಂಪ್ರದಾಯ ಕುಟುಂಬದ ಹೆಣ್ಣಾಗಿ ಸ್ವೀಕರಿಸಿದ್ದಾಳೆ.

ಹೀಗೆ ಕಾದಂಬರಿಯೊಳಗೆ ಹೆಬ್ಬಾರರ ಸಣ್ಣತನದ ಪರಿಚಯವಾಗಿದೆ. ರುಕುಣಿಯಮ್ಮನ ಧರ್ಮಾಂಧತೆಯ ಚಿತ್ರಣ ಸಿಗುತ್ತದೆ. ಹೀಗೆ ಇವರ ಧರ್ಮದ ದ್ವಂದ್ವಗಳು ದ್ರೌಪದಿಯ ನೋವು ಅದ್ರಾಮನ ಬದುಕಿನಲ್ಲಿ ಬದಲಾವಣೆಯನ್ನು ಸೂಚಿಸುತ್ತದೆ. ದ್ರೌಪದಿಯು ತಾಯಿಯ ಹೊಡೆತಕ್ಕೆ ಜರ್ಜರಿತವಾಗಿದ್ದಾಳೆ. ಈ ಸಂದರ್ಭದಲ್ಲಿಯೇ ತುಳುನಾಡಿಗೆ ಗಾಂಧಿ ಬರುವುದು ತಿಳಿಯುತ್ತದೆ. ಗಾಂಧಿಯ ಮೌಲ್ಯಗಳಲ್ಲಿ ಒಂದಾದ ವಿಧವಾವಿವಾಹ ಇಲ್ಲಿಂದ ಪೂರ್ಣ ರೂಪವನ್ನು ಪಡೆದುಕೊಳ್ಳುತ್ತದೆ."...ಜಾತಿಮತದ ಗೋಡೆಯುರುಳಿಸಲು ಗಾಂಧಿಯವರು ಹಗಲಿರುಳು ದುಡಿಯುತ್ತಿದ್ದಾರೆ ....." ('ಗಾಂಧಿ ಬಂದ' ಪು.ಸಂ. ೭೯). ಮುಂದೆ ದ್ರೌಪದಿ ಅದ್ರಾಮರ ಮದುವೆ ನಡೆಸುವ ಸಿದ್ಧತೆ ನಡೆಯುತ್ತದೆ. ಬಂಟರ ನೆರವಿನಿಂದ ಮದುವೆ ನಡೆಯುತ್ತದೆ. ಅನ್ಯಾಯದ ವಿರುದ್ಧ ಹೋರಾಡುವ ಬಂಟರಿಗೆ ಮಾಡಿದ ಕೆಲಸ ನ್ಯಾಯ ಸಮ್ಮತವಾಗಿ ಕಾಣಿಸುತ್ತದೆ. ದ್ರೌಪದಿಯ ಜೀವನದಲ್ಲಿ ಅನ್ಯಜಾತಿಯ ಹುಡುಗನ ಪ್ರವೇಶವು ಎರಡು ಕೋಮುಗಳ ಮಧ್ಯೆ ಸಂಘರ್ಷವನ್ನು ನಿರ್ಮಿಸಿತು. ಹೆಬ್ಬಾರರ ಮಡಿಯ ಪ್ರಪಂಚ ಹಾಳಾಗುತ್ತದೆ. ಉಳಿಸಿಕೊಂಡು ಬಂದ ಸುರಗಿ ಮಠದ ಧರ್ಮದ ಗೋಪುರ ಉರುಳುತ್ತದೆ. ಈ ಮದುವೆಯು ಜಾತಿ, ಸಂಪ್ರದಾಯ ನಂಬಿಕೆ, ಆಹಾರ ಪದ್ಧತಿಗಳಲ್ಲಿರುವ ಸ್ಥಿತಿಯನ್ನು ಒಡೆಯುತ್ತದೆ. ಸುರಗಿ ಮಠದ ಜನರಿಗೆ ದಿಗ್ಭ್ರಮೆಯಾಗುತ್ತದೆ. ಜನಿವಾರದೊಂದಿಗೆ ಬಂದ ಹಿಂದೂ ಸಂಸ್ಕೃತಿಯ ನಂಬಿಕೆಗಳನ್ನು ಹಣ ಬಲಗಳು, ಶ್ರಮಬಲಗಳು ಒಡೆದವು.

ಅದ್ರಾಮನು ಮುಸ್ಲಿಂನಾಗಿ ಹುಟ್ಟಿ ಬೆಳೆದು ಬಂದ ಕಾರಣ ಈ ಜಾತಿ ಧರ್ಮದ ಮಧ್ಯೆಯೇ ಸಂಘರ್ಷಗಳು ಉಂಟಾಗಿವೆ. ಅದ್ರಾಮನ ತಂದೆ ಮ್ಯೊದಿನ್ ಬ್ಯಾರಿಯವರಿಗೆ ಮಗ ಮಾಡಿದ ಕೆಲಸ ತಪ್ಪಾಗಿ ಕಾಣಿಸುತ್ತದೆ. ಧರ್ಮದ ಭಯ ಇವರನ್ನು ಕಾಡಿತ್ತು. ". . . ಬ್ರಾಹ್ಮಣರ ಶಾಪ ಏಳೇಳು ಜನ್ಮಕ್ಕೂ ದಾಟಿಬರುವಂತದ್ದು . . . " ('ಗಾಂಧಿ ಬಂದ' ಪು.ಸಂ. ೩೦೩) ಎಂದು ಹೆದರಿ ಜೀವಿಸುವುದು ಇಲ್ಲಿ ಧರ್ಮದ ಭಯ ಒತ್ತಡಗಳನ್ನು ತಿಳಿಸುತ್ತದೆ. ಒಂದು ಧರ್ಮದ ನಂಬಿಕೆ ಇನ್ನೊಂದು ಧರ್ಮದ ಈ ಪ್ರಭಾವವನ್ನು ಸಾಂಸ್ಕೃತಿಕ ಪ್ರಭಾವವೆಂದು ಗುರುತಿಸಬಹುದಾಗಿದೆ.

ಅದ್ರಾಮನಿಗೆ ಮಸೀದಿಯ ಜಮಾತಿನಿಂದ ಕರೆ ಬಂದಿತು. ಮಸೀದಿಯ ಸಂಪ್ರದಾಯದಂತೆ ಆಕೆಯನ್ನು ಮುಸ್ಲಿಂ ಜಾತಿಗೆ ಬದಲಾಯಿಸುವ ಸಂದೇಶವಾಯಿತು. ಜಾತಿಯು ಮನುಷ್ಯ ಸಂಬಂಧಗಳ ಒಳಸೂಕ್ಷ್ಮಗಳನ್ನು ಅರ್ಥ ಮಾಡಿಕೊಳ್ಳುವುದಿಲ್ಲ. ಹಾಗೆಯೇ ಪ್ರೀತಿ, ಮಾನವೀಯತೆ, ನಂಬಿಕೆಗಳನ್ನು ಒಡೆಯಲು ಧರ್ಮದ ರೀತಿ-ನೀತಿಗಳು ಇಲ್ಲಿ ಪ್ರವೇಶ ಪಡೆದುಕೊಳ್ಳುತ್ತವೆ. ಅನ್ಯಜಾತಿಯನ್ನು ಮದುವೆಯಾಗಲು ಮುಸ್ಲಿಂ ಜಾತಿಯಲ್ಲಿ ಒಪ್ಪಿಗೆಯಿದ್ದರೂ, ವಿರೋಧಿಸುತ್ತಾರೆ. ಈ ಕೆಲಸಗಳಿಗೆ ಹಿರಿಯರಾದ ತಂದೆ ಮ್ಯೊದಿನ್ ಬ್ಯಾರಿ ಅದ್ರಾಮನಿಗೆ ಸರಿಯಾದ ಉಪದೇಶ ಮಾಡದೆ ಬೆಳೆಸಿದ್ದಾನೆಯೆಂಬ ಆರೋಪವೂ ಬಂತು. ಹೀಗೆ ಎರಡು ಕುಟುಂಬದೊಳಗಿಂದ ಹುಟ್ಟಿದ ಸಂಘರ್ಷವು ಜಾತಿ-ಧರ್ಮಗಳ ಒಳಗೆ ಸಂಘರ್ಷವನ್ನು ಉಂಟು ಮಾಡಿದವು. ಮಸೀದಿಯ ಸಂಸ್ಕೃತಿಗೂ, ಹಿಂದೂ ಸಂಸ್ಕೃತಿಗೂ ಸಂಘರ್ಷಗಳು ತಾನಾಗಿ ಕಾಣಿಸಿಕೊಂಡಿದೆ. ಆದರೆ ಮೂಲಭೂತ ನಂಬಿಕೆಗಳಲ್ಲಿ ಎರಡೂ ಧರ್ಮಗಳ ನಡುವಿರುವ ಹೋಲಿಕೆಯು ವ್ಯಂಗ್ಯವಾಗಿ ಹೆಬ್ಬಾರ ಮತ್ತು ಮ್ಯೊದಿನ್ ಬ್ಯಾರಿಯವರ ವ್ಯಕಿತ್ವದ ಮೂಲಕ ಅಭಿವ್ಯಕ್ತಿಯಾಗಿದೆ.

ಜಮಾತಿನ ಮುಕ್ರಿಯವರು ಅದ್ರಾಮನಿಗೆ ಮತಾಂತರದ ಅಗತ್ಯವನ್ನು ತಿಳಿಸಿ ಹೇಳಿದರು. ಆದರೆ ಅದ್ರಾಮನಲ್ಲಿ ಯಾವುದೇ ಬದಲಾವಣೆ ಆಗುವುದಿಲ್ಲ. ". . . . . . . . ಪ್ರೀತಿಗೆ ಜಾತಿಯಿಲ್ಲ, ಮುಕ್ರಿ ಸಾಯಿಬರೆ ಸಾವಿಗೂ ಜಾತಿ ಇಲ್ಲ . . . .. . . . ." ('ಗಾಂಧಿ ಬಂದ' ಪು. ಸಂ. ೨೦೬). ಮನುಷ್ಯ ತಾಯಿಯ ಗರ್ಭದಿಂದ ಹೊರಗೆ ಬಂದಾಗ ಅವನಿಗೆ ಯಾವ ಜಾತಿಯ ಕವಚವೂ ಇರುವುದಿಲ್ಲ. ಈ ಶರೀರದಲ್ಲಿ ಹರಿವ ರಕ್ತ, ಉಸಿರಾಡುವ ಗಾಳಿ, ನಿಲ್ಲುವ ನೆಲ, ಕುಡಿಯುವ ನೀರು ಇವುಗಳಲ್ಲಿ ವ್ಯತ್ಯಾಸಗಳಿಲ್ಲ. ಜಾತಿಯನ್ನು ಮೀರಿದ್ದು ಮನುಷ್ಯತ್ವ. ಇದು ಅಂತಃಕರಣದ ಆಸ್ತಿಎಂದು ಸೂಚ್ಯವಾಗಿ ತಿಳಿಸುವ ಪ್ರಯತ್ನ ಇಲ್ಲಿದೆ. ಭೂಮಿಯ ಮೇಲೆ ಕೆಲವು ವರ್ಷಗಳಷ್ಟು ಮನುಷ್ಯ ಬದುಕನ್ನು ಅನುಭವಿಸುತ್ತಾನೆ. ಮತ್ತೊಂದು ದಿನ ಸಾವು ಬರುತ್ತದೆ. ಆ ಸಾವು ಕೂಡ ಜಾತಿಯ ಗಮನಿಸಿ ಬರುವುದಿಲ್ಲ. ಸಾವಿನ ಮುಂದೆ ಬಡವ - ಶ್ರೀಮಂತ - ಮೇಲ್ಜಾತಿ - ಕೆಳಜಾತಿಗಳೆಂಬ ಬೇಧವಿಲ್ಲ. ಈ ಎಲ್ಲಾ ಸತ್ಯಾಂಶಗಳ ಮಾತುಗಳು, ಧರ್ಮಾಂಧರಲ್ಲಿ ಬಲವಾದ ಪ್ರತಿಕ್ರಿಯೆಯನ್ನುಂಟು ಮಾಡಿತು. ಅಸ್ಪೃಶ್ಯರಿಗೆ ಸಾಮರಸ್ಯದ ಸಂಕೇತವಾಗಿ ಮದುವೆ ಕಾಣಿಸಿಕೊಂಡಿತು. ಪ್ರೀತಿ ಮಾತ್ರ ದೇವರಿಗೆ ಕಾಣಿಸಿತು. ಆಳುಗಳಿಗೆ ಈ ಬದಲಾವಣೆಯು ಧ್ವನಿ ತೆಗೆದು ಮಾತನಾಡುವ ಅವಕಾಶವನ್ನು ನೀಡಿದವು.

ಹೆಬ್ಬಾರರ ಧರ್ಮ ಸಂಕಟದ ಎಲ್ಲೆ ಮೀರಿತು. ತಮ್ಮ ಧರ್ಮಕ್ಕಂಟಿದ ಕೊಳೆಯನ್ನು ತೊಳೆಯಲು ಇವರು ಮಗಳಿಗೆ 'ಘಟಶ್ರಾದ್ಧ'ವನ್ನು ಮಾಡುವ ನಿರ್ಧಾರ ಮಾಡುತ್ತಾರೆ. ಸತ್ತಮೇಲೆ ಮಾಡುವ ವಿಧಿ ವಿಧಾನಗಳಿಗೆ ಶ್ರಾದ್ಧ ಎನ್ನುತ್ತಾರೆ. ಜೀವಂತವಾಗಿರುವ ವಿಧವೆ ದ್ರೌಪದಿಗೆ ಮಾಡುವ ಈ ಆಚರಣೆ ಘಟಶ್ರಾದ್ಧವಾಗಿ ಕಾಣಿಸಿಕೊಂಡಿದೆ. ಬ್ರಹ್ಮಜ್ಞಾನವನ್ನು ಪಡೆದವನನ್ನು ಬ್ರಾಹ್ಮಣ ಎಂದು ಕರೆಯಲಾಗುತ್ತದೆ. ಇದು ಬ್ರಾಹ್ಮಣತ್ವದ ಸೋಲಾಗಿ ಕಾಣಿಸಿದೆ. ಇಲ್ಲಿ ಧರ್ಮ ಯಾವುದು ಎಂಬ ಮಾನವ ಸಹಜವಾದ ಪ್ರಶ್ನೆ ಏಳುತ್ತದೆ. ಹೆಬ್ಬಾರರಿಗೆ ಮಗಳು, ಮಗಳ ಹೆಸರು ಬೇಕಾಗಿರಲಿಲ್ಲ. ಸಂಬಂಧಗಳನ್ನು ಧರ್ಮದ ಮೂಲಕ ತಿರಸ್ಕರಿಸುವ ಕೆಲಸವನ್ನು ಮೇಲಿನ ನೆಲೆಯಲ್ಲಿ ಗುರುತಿಸಬಹುದು.

ಸಂಘರ್ಷವೇರ್ಪಡಿಸಿದ್ದ ಮದುವೆಯು ಮುಂದಿನ ದಿನಗಳಲ್ಲಿ ಸಾಮರಸ್ಯದಲ್ಲಿ ಅಂತ್ಯವಾಯಿತು. ದ್ರೌಪದಿಯ ಬೋಳು ತಲೆಯಲ್ಲಿ ಕೂದಲು ಬೆಳೆಯುತ್ತದೆ. ಊರಿನ ಶೂದ್ರಮಕ್ಕಳಿಗೆ ಈಕೆಯು "ದೋಪು ಬ್ಯಾರ್ದಿ" ಯಾದಳು. ಹೇಳಿಕೊಳ್ಳುವಂತಹ ಯಾವ ಕಟ್ಟುನಿಟ್ಟುಗಳನ್ನು ಅದ್ರಾಮ ದ್ರೌಪದಿಗೆ ಹೇರಲಿಲ್ಲ. ಊಟ ತಿಂಡಿಯಲ್ಲಿ, ದೇಹಶುಚಿಯಲ್ಲಿ ಸ್ವಲ್ಪ ಮಟ್ಟಿಗೆ ನೈರ್ಮಲ್ಯವನ್ನು ಉಳಿಸಿಕೊಂಡಳು. ಜಾತಿಮತಗಳಿಂದ ಮುಕ್ತರಾಗಿ ಪ್ರೀತಿ–ಮಾನವೀಯತೆಯನ್ನು ಉಳಿಸಿಕೊಂಡರು. ಕೊರಗರ ಐತುವಿನಿಂದ ಗೆಳತಿ ದಾರುವಿನ ತನಕ ಈಕೆಯ ಸಹಾಯಕ್ಕೆ ಎಲ್ಲರೂ ಬಂದರು. ಕಾರ್ನಾಡರು ನೀಡಿದ ಔತಣವನ್ನು ಸ್ವೀಕರಿಸಿದರು. ಖಾದಿ ಸೀರೆಯನ್ನು ದ್ರೌಪದಿಗೆ ನೀಡುವುದರ ಮೂಲಕ ಗಾಂಧಿ ತತ್ವವನ್ನು ಅನುಷ್ಠಾನಗೊಳಿಸಿದರು. ಹೀಗೆ ಒಂದು ಸಾಮರಸ್ಯದ ಸಾಮಾಜಿಕ ಸಂದರ್ಭದಲ್ಲಿ ಅದ್ರಾಮ – ದ್ರೌಪದಿಯರು ಬದುಕನ್ನು ನಡೆಸಿದರು. ತುಳುನಾಡಿನ ಬದುಕಿನಲ್ಲಿ ಚಾರಿತ್ರಿಕವೆನ್ನಬಹುದಾದ ಘಟನೆ ನಡೆದುಹೋಯಿತು.

ದಾರು – ಮಾರಪ್ಪರು ಸಂಘರ್ಷ ಸಾಮರಸ್ಯಗಳನ್ನು ನಿರ್ಮಿಸುವ ಇನ್ನೆರಡು ಪಾತ್ರಗಳು. ದಾರು ಸುಂದರಿ. ಆದರೆ ಈಕೆಯು ಬಂಜೆಯೆಂದು ಸಮಾಜದೊಳಗೆ ಗುರುತಿಸಿಕೊಂಡವಳು. ಬಂಜೆತನವನ್ನು ಸಮಾಜ ಒಪ್ಪಿಕೊಳ್ಳುವುದಿಲ್ಲ. ಹೆಣ್ಣಿನ ಜೀವನವನ್ನು ಮದುವೆ, ಮಕ್ಕಳು ಜವಾಬ್ದಾರಿಯ ನೆಲೆಯಿಂದಲೇ ಸಮಾಜ ಗ್ರಹಿಸುತ್ತಾ ಬಂದಿದೆ. ". . . . . ಈಕೆಗೆ ಗರ್ಭಕೋಶವೇ ಇಲ್ಲ . . . ." (ಗಾಂಧಿ ಬಂದ ಪು.ಸಂ. ೧೨೦). ಸುತ್ತಲಿನ ಜನರ ಮಾತಿಗೆ ದಾರು ವಸ್ತುವಾಗುತ್ತಾಳೆ. ಈ ಸ್ಥಿತಿಯಿಂದ ಆಕೆ ಮದುವೆ ಆಗುವ ಹಾಗಿರಲಿಲ್ಲ. ಮಾತೃ ಪ್ರಧಾನ ವ್ಯವಸ್ಥೆಯ ಭಾಗವಾಗಿದ್ದ ಇವಳಿಗೆ ಆಸ್ತಿಯಲ್ಲಿ ಸಂಪೂರ್ಣ ಹಕ್ಕಿತ್ತು. ಆದರೆ ಮದುವೆಯಾಗಲು ಯಾವ ಹುಡುಗ ಸಿದ್ಧನಿರಲಿಲ್ಲ. ಗಾಂಧಿ ತತ್ವಗಳನ್ನು ಅನುಷ್ಠಾನ ಗೊಳಿಸಲು ಸದಾ ತನ್ನನ್ನು ಕ್ರಾಂತಿಯಲ್ಲಿ ತೊಡಗಿಸಿಕೊಂಡನು ಮಾರಪ್ಪ. ಸಾಮಾಜಿಕ ಕಾಳಜಿಯಿರುವ ಈತ ಈ ನೆಲೆಯಲ್ಲಿ ದಾರುವನ್ನು ಮದುವೆ ಆಗುತ್ತಾನೆ.

ಮದುವೆಯೆನ್ನುವುದು ಸ್ವರ್ಗದಲ್ಲಿ ನಿರ್ಧಾರವಾಗಿದೆ. ಗಂಡು ಮಕ್ಕಳು ಹುಟ್ಟಿದರೆ ಮೋಕ್ಷ ಸಿಗುತ್ತದೆಯೆಂದು ನಂಬಿದ ಸಾಂಪ್ರದಾಯಿಕ ಸಮಾಜದ ಆಲೋಚನೆಗಳನ್ನು ಈ ಮದುವೆ ಒಡೆಯುತ್ತದೆ. " . . .. . . . . . .. . . ಕೊಳೆತ ಕುಂಬಳ ಕಾಯಿಗೆ ಕೆಟ್ಟ ತೆಂಗಿನಕಾಯಿ" ಎಂದು ಹೆಬ್ಬಾರರು ರುಕುಣಿಯಮ್ಮನಿಗೆ ವಿಚಾರ ತಿಳಿಸಿ ಕ್ಕೆ ಕ್ಕೆ ಕ್ಕೆ ಕೇ . . . . . . . ... . ಎಂದು ನಕ್ಕರು . . . . . . . . . .. . ." ('ಗಾಂಧಿ ಬಂದ' ಪು. ಸಂ. ೨೩೬) ಧರ್ಮ ಶಾಸ್ತ್ರದ ಅಮಲು ಹೆಬ್ಬಾರರಿಗೆ ಇನ್ನೂ ಇಳಿದಿಲ್ಲ. ಇನ್ನೊಬ್ಬರ ಕುರಿತು ಆಡಿಕೊಳ್ಳುವ ಸ್ಥಿತಿಯು ಧರ್ಮದ ಉಗ್ರ ಸ್ವರೂಪ, ಆಳ್ವಿಕೆಯನ್ನು ತಿಳಿಸುತ್ತದೆ. ಪ್ರಕೃತಿಯ ಧರ್ಮವನ್ನು ಲಾಭಕ್ಕೆ ಬಳಸಿಕೊಂಡ ಧರ್ಮದ ಲಾಭದ ಆಲೋಚನೆಗಳನ್ನು ದಾರುವಿನ ಮದುವೆ ಮುರಿಯುತ್ತದೆ. ಹೆಣ್ಣಿನ ಬದುಕು ಪರಿಪೂರ್ಣವಾಗುವುದು ಮದುವೆ, ಮಕ್ಕಳಲ್ಲಿ ಅಲ್ಲವೆಂಬುದು ಇಲ್ಲಿ ಅಭಿವ್ಯಕ್ತಿಗೊಂಡಿದೆ.. ಸ್ತ್ರೀ ಪಾತ್ರಗಳು ಪುರುಷ ಸಹಾಯದ ಮೂಲಕ ಸಂಘರ್ಷವನ್ನು ನಿರ್ಮಿಸಿವೆ. ಮುಂದೆ ವ್ಯವಸ್ಥೆಯೊಳಗೆ ಸಾಮರಸ್ಯಕ್ಕೆ ಕಾರಣವಾಗುತ್ತದೆ.

ಗಾಂಧಿಯ ಮೌಲ್ಯವು ತುಳುನಾಡಿಗೆ ಪ್ರವೇಶವಾದಾಗ ಬ್ರಾಹ್ಮಣರು – ಅಬ್ರಾಹ್ಮಣರ ಮಧ್ಯೆ ಸಂಘರ್ಷ ಉಂಟಾಯಿತು. ತಮ್ಮ ಒಡೆಯರಾದ ಹೆಬ್ಬಾರರ ವಿರುದ್ಧ ಆಳು ಮಕ್ಕಳು ಮಾತನಾಡುತ್ತಾರೆ. ಮಾರಪ್ಪನು ಗಾಂಧಿ ತತ್ವಗಳನ್ನು ಅನುಷ್ಠಾನ ಮಾಡಲು ಊರೆಲ್ಲಾ ತಿರುಗಾಡುತ್ತಿದ್ದಾನೆ. ಪಾನ ನಿಷೇಧದ ಕಾನೂನಿನ ಬಗ್ಗೆ ಜನರಿಗೆ ತಿಳಿಸುತ್ತಿದ್ದಾನೆ. ಜನರಿಗೆ ಇದರ ಬಗ್ಗೆ ಅರಿವು ಮೂಡಿದೆ. ತಮ್ಮ ಬದುಕಿನ ಇತಿ ಮಿತಿಗಳು ಇವರಿಗೆ ಸಿಗುತ್ತವೆ. ಹೆಬ್ಬಾರರ ಮನೆಗೆ ಹೋಗುವ ಕೆಲಸದಾಳುಗಳ ಸಂಖ್ಯೆ ಕಡಿಮೆಯಾಗುತ್ತಿದೆ. ಆ ಮೂಲಕ ಮೇಲ್ಜಾತಿ ಕೆಳಜಾತಿಗಳ ಶೀತಲ ಸಮರವು ಸಂಘರ್ಷಗಳಿಗೆ ಎಡೆ ಮಾಡುತ್ತದೆ.

ಗಾಂಧಿ ಮೌಲ್ಯವನ್ನು ಪ್ರಸಾರ ಮಾಡಲು ಕಾರ್ನಾಡರು ಗಾಂಧಿ ರೂಪದಲ್ಲಿ ಜನರಲ್ಲಿಗೆ ಬರುತ್ತಾರೆ. ಅದನ್ನು ಈ ರೀತಿ ವಿಶ್ಲೇಷಿಸಬಹುದು. ". . . . . . . .. . . ಆ ಪುಣ್ಯಾತ್ಮ ಸಿರಿವಂತರಲ್ಲಿ ಸಿರಿವಂತನಂತೆ ಗಾಂಧಿಯವರ ದಾರಿ ತುಳಿಯಲು ಇಡಿಯ ಸಿರಿವಂತಿಕೆಯನ್ನು ಬಿಟ್ಟುಕೊಟ್ಟರಂತೆ. ಮನ್ಸ ಕೊರಗರು ಮತ್ತೆಂದೂ ಬೇರೆಯವರ ಎಂಜಲೆಲೆ ಮುಟ್ಟ ಬಾರದು ಎಂದು ಆಣೆ ಹಾಕಿಸಿದರಂತೆ. ಅವರನ್ನು ತಮ್ಮವರೆಂಬಂತೆ ಕೈ ಹಿಡಿದು ತಮ್ಮ ಮನೆಯೊಳಗೆ ಕರೆದೊಯ್ದು ಜೊತೆಯಲ್ಲಿ ಊಟ ಮಾಡಿಸಿದರಂತೆ . . ." ('ಗಾಂಧಿ ಬಂದ' ಪು. ಸಂ ೮೫). ಇಲ್ಲಿ ಸಾಮಾಜಿಕ ನೆಲೆಯಿಂದ ಜನರು ಒಟ್ಟಿಗೆ ಬಾಳುವ ಸಹಬಾಂಧವ್ಯದ ಚಿತ್ರಣದ ಆಶಯವಿದೆ. ಮನೆಯ ಜಗಲಿಯ ದಾಟಿ ಅಸ್ಪೃಶ್ಯರು ಇನ್ನೊಬ್ಬರ ಮನೆಯ ಒಳಗೆ ಪ್ರವೇಶಿಸುವ ಅಧಿಕಾರ ಸಿಕ್ಕಿದೆ. ಜೊತೆಯಲ್ಲಿ ಸಮಾನವಾಗಿ ಕುಳಿತು ಆಹಾರವನ್ನು ತಿನ್ನುವ ಅವಕಾಶಗಳಿವೆ. ಹೀಗೆ ಒಂದು ಸಾಮಾಜಿಕ ನಂಬಿಕೆಗಳನ್ನು ಪ್ರಶ್ನಿಸಲಾಗಿದೆ. ಅಸ್ಪೃಶ್ಯರ ಬದುಕಿನಲ್ಲಿ ಸ್ಥಿತ್ಯಂತರಗಳು ಈ ನೆಲೆಯಲ್ಲಿ ಸಾಧ್ಯವಾಗುತ್ತದೆ. ಇದು ತುಳುನಾಡಿನ ಸಾಮಾಜಿಕ ಸಾಂಸ್ಕೃತಿಕ ಬದುಕಿನ ಮೇಲೆ ತೀವ್ರ ಪರಿಣಾಮವನ್ನು ಬೀರಿದೆ.

ಗಾಂಧಿಯನ್ನು ನೋಡುವ ಸಂದರ್ಭದಲ್ಲಿ ಎಲ್ಲಾ ಜಾತಿಯ ಜನರು ಸೇರಿದ್ದಾರೆ. ಆ ಸಭೆಯೊಳಗೆ ಅವರ ಮಡಿ ಮೈಲಿಗೆ ಕಳೆದುಹೋಗಿದೆ. "............... .ಮೆರವಣಿಗೆಯಲ್ಲಿ ಮುಂದೆ ಮುಂದೆ ತಪ್ಪಿಸಿಕೊಂಡು ಮುಂದುವರಿಯುತ್ತಿದ್ದ ಮಂಜಪ್ಪನನ್ನು ಅಂತಪ್ಪ ಮತ್ತೆ ಹಿಂದಕ್ಕೆ ಎಳೆದು ತಂದು, ಗುತ್ತಿನ ಶೆಟ್ಟರ "ಮೆರವಣಿಗೆ" ತಂಡಕ್ಕೆ ಸೇರಿಸಿಕೊಂಡ. ಎಲ್ಲರೂ ಹೊಟ್ಟೆಯ ಚಿಂತೆ ಮರೆತು, ಗಾಂಧಿಯವರ ಮೆರವಣಿಗೆ ಹಿಂದೆಯೇ ಕಿಂದರಿ ಜೋಗಿಯ ಬೆನ್ನು ಹಿಡಿದು ನಡೆದ ಇಲಿಗಳಂತೆ ನಡೆದರು." ('ಗಾಂಧಿ ಬಂದ' ಪು. ಸಂ ೧೭೬) ಇದನ್ನೆಲ್ಲಾ ಗಮನಿಸಿದಾಗ ಗಾಂಧಿ ಬರುವಲ್ಲಿ ಒಂದು ತಂಡ ಸಿದ್ಧವಾಗಿದೆ. ಅಲ್ಲಿ ಒಂದು ಸಮೂಹ ಪ್ರಜ್ಞೆ ನಿರ್ಮಾಣವಾಗಿದೆ ಜಾತಿ ಪ್ರಜ್ಞೆ ಇಳಿಮುಖವಾಗಿರುವುದು ಗೋಚರವಾಗುತ್ತದೆ.

ಗಾಂಧಿ ತುಳುನಾಡಿಗೆ ಕೊನೆಯ ಸಲ ಬರುವಾಗ ಆಳುಮಕ್ಕಳ ಜೀವನ ಕ್ರಮದಲ್ಲಿ ದೊಡ್ಡ ವ್ಯತ್ಯಾಸ ನಡೆದು ಹೋಯಿತು. ಹೆಬ್ಬಾರರು ಆಜ್ಞೆ ಮಾಡಿದಾಗ ಆಳು ಮಕ್ಕಳು ಡೋಲು ಬಾರಿಸಬೇಕಿತ್ತು. ಆದರೆ ಇಂದು ಹಾಗಲ್ಲ . . ". ........... ಕೊರಗರ ಐತುವಿನ ಅಳಿಯ ಪೊತ್ವೆಲ ಡೋಲು ಏರಿಸಿಕೊಂಡೆ ಹೊರಟಿದ್ದಾನೆ. ಆತನ ಹಿಂದೆ ಬಾಲವಾಗಿ ಕೊರಗರ ದೊಡ್ಡ ಗುಂಪೇ ಇದೆ. ......... . . ." ('ಗಾಂಧಿ ಬಂದ' ಪು. ಸಂ ೩೪೬). ಇವರು ಗಾಂಧಿಯನ್ನು ನೋಡುವ ಸಂಭ್ರಮದಲ್ಲಿದ್ದಾರೆ. ಹೆಬ್ಬಾರರು ಇವರಿಗೆ ಇಲ್ಲಿ ಮುಖ್ಯವಾಗಿಲ್ಲ. ಕೊರಗರು ತಾವಾಗಿ ಮಾಡಿಕೊಂಡ ಬಿಡುವು ಅವರಿಗೆ ಬಿಡುಗಡೆಯನ್ನು ನೀಡಿದೆ. ಕೊರಗರ ಈ ಸಂಭ್ರಮ ಎಲ್ಲಿಗೆ ಎಂಬ ಪ್ರಶ್ನೆ ಹೆಬ್ಬಾರರಿಗೆ ಎದುರಾಯಿತು. ಹೀಗೆ ಒಂದು ವ್ಯಕ್ತಿಯ ರೂಪದಲ್ಲಿ ಬರುವ ಗಾಂಧಿಯು ಶೂದ್ರರ ಚಿಂತನಾ ಕ್ರಮದಲ್ಲಿ ಮಹತ್ತರ ಬದಲಾವಣೆಯನ್ನು ಮಾಡಿದರು. ಹೆಬ್ಬಾರರ ಕುತಂತ್ರ, ಮೋಸ, ಅನ್ಯಾಯಗಳಿಂದ ಆಳು ಮಕ್ಕಳು ರೋಸಿ ಹೋಗಿದ್ದರು. ಜೀವನ ಪರ್ಯಂತ ಜೀತಕ್ಕೆ ಇಟ್ಟುಕೊಳ್ಳುವ ಜೀತ ಪದ್ಧತಿಯಿಂದ ಮುಕ್ತಿ ಸಿಗಬೇಕಾದ ಹೋರಾಟ ಕನಸು ಇಲ್ಲಿದೆ. ತಮ್ಮ ಜನ ನಾಯಕ ಗಾಂಧಿಯ ನೋಡುವ ಹಂಬಲವು ಈ ರೀತಿಯ ಸಂಘರ್ಷ, ಸಂಘಟನೆಗಳಿಗೆ ಕಾರಣವಾಗಿದೆ.

ಈ ಸಂದಿಗ್ಧ ಸ್ಥಿತಿಯಲ್ಲಿ ಹೆಬ್ಬಾರರಿಗೆ ಶೂದ್ರ ಮಕ್ಕಳ ಪ್ರಯಾಣ ಎಲ್ಲಿಗೆಂದು ಅರ್ಥವಾಗಲೇ ಇಲ್ಲ "........... ಎಲ್ಲಿಗೋ ಸಾವು ಕೊಂಡೋಗ್ತಾ ಇದ್ದಿ ! ಯಾರು ಸತ್ತರೋ ? . . . ........." ('ಗಾಂಧಿ ಬಂದ' ಪು. ಸಂ ೩೪೭) ಎಂದು ಕೊರಗ ಪೊತ್ವೆಲನನ್ನು ಕೇಳಿದರು. ಈ ಎಲ್ಲಾ ಸನ್ನಿವೇಶಗಳಲ್ಲಿ ಒಂದು ಸಂಘರ್ಷದ ಮೂಲಕ ಸಾಮರಸ್ಯವು ಸಾಮಾಜಿಕ ಸನ್ನಿವೇಶದಲ್ಲಿ ನಿರ್ಮಾಣವಾಗುವ ರೀತಿ ಅನನ್ಯವಾದುದು. ಈ ವಿಶಿಷ್ಟ ಬದಲಾವಣೆಗಳಿಗೆ ಗಾಂಧಿಯ ಬರುವಿಕೆಯ ಮೂಲಕ ಸಾಧ್ಯವಾಯಿತು.

ಬ್ರಾಹ್ಮಣರನ್ನು ಎದುರು ಹಾಕಿಕೊಳ್ಳಲು ಸಾಧ್ಯವಿಲ್ಲ. ಅಸ್ಪೃಶ್ಯರ ಸಮಸ್ಯೆಯ ಆಲೋಚನೆಯು ಗಾಂಧಿ ಮೌಲ್ಯದಲ್ಲಿ ಬದಲಾಗುತ್ತದೆ. " . . . . . . . . . . ಯಾಕೋ ಮನುಷ್ಯರೆಂದರೆ ಎಲ್ಲರೂ ಒಂದೇ ಎಲ್ಲವೂ ನಾವು ಮಾಡಿಕೊಂಡಿರುವ ಭೇದ ಎಂದು ಗಾಂಧಿಯವರು ಹೇಳಿದ್ದಲ್ವಾ ? ಆ ಜಾತಿ ಈ ಜಾತಿ ಯಾವುದು ಬೇರೆಯಲ್ಲ. ಎಲ್ಲಾ ಒಂದೇ ಮಾರಾಯಾ" _ ('ಗಾಂಧಿ ಬಂದ' ಪು ಸಂ ೨೫೨) ಎಂದು ತೋಮಸನು ಹೇಳುತ್ತಾನೆ. ಜನರಿಗೆ ಜಾತಿಯ ಟೊಳ್ಳುತನದ ಬಗ್ಗೆ ಅರಿವು ಮೂಡಿದೆ. ಮನುಷ್ಯತ್ವವನ್ನು ಜಾತಿಗಿಂತ ಮುಖ್ಯವಾಗಿ ಕಾಣುತ್ತಿದ್ದಾರೆ. ಹೀಗೆ ಸಾಮಾಜಿಕ, ಧಾರ್ಮಿಕ ನೆಲೆಗಳ ಸಂಘರ್ಷಗಳು ಕೊನೆಗೊಮ್ಮೆ ಸಾಮರಸ್ಯದಲ್ಲಿ ಅಂತ್ಯವಾಗುತ್ತವೆ. ಆಧುನಿಕ ಶಿಕ್ಷಣದ ಪ್ರಭಾವ ಕೈಗಾರೀಕರಣ, ಸ್ವಾತಂತ್ರ್ಯ ಚಳುವಳಿಯ ಸಂದರ್ಭಗಳು ಕೆಳ ಜಾತಿಯವರಿಗೆ ಸಮಾಜ ಮುಖ್ಯ ವಾಹಿನಿಯಲ್ಲಿ ಬೆರೆಯುವ ಅವಕಾಶವನ್ನು ಕಲ್ಪಿಸುತ್ತದೆ. ಈ ಬದಲಾವಣೆ ಗಾಂಧಿಯ ಬರುವಿಕೆ ಒಂದು ನೆಪವಾಯಿತು.

ಸಮಾಜದ ಅನಿಷ್ಟ ಪದ್ದತಿಗಳಾದ ಜಾತಿ, ಜೀತ ಪದ್ಧತಿಗಳನ್ನು ಬುಡ ಸಮೇತ ನಿರ್ನಾಮ ಮಾಡಲು ಗಾಂಧಿ ಸನ್ನದ್ಧರಾದರು. ಸತ್ಯ-ಅಹಿಂಸೆ ಮತ್ತು ಮಾನವ ಪ್ರೇಮದ ಒಂದು ಎಳೆಯ ಮೂಲಕ ತುಳುನಾಡ ಸಂಸ್ಕೃತಿ ನಿಂತಿದೆ ಎಂಬ ಸಂದೇಶ ಇಲ್ಲಿ ವ್ಯಕ್ತವಾಗಿದೆ. ಇದರಿಂದಲೇ ಗಾಂಧಿ – ಗಾಂಧಿ ತತ್ವಗಳು ಇಲ್ಲಿ ಪೂರಕವಾಗಿದೆ.

ಕರ್ತವ್ಯವನ್ನು ಮುಂದಿಡುವ, ಬದಲಾವಣೆಯನ್ನು ನಿರ್ಮಿಸುವ ಪಾತ್ರಗಳಾಗಿ ದ್ರೌಪದಿ, ಕೊರಗರು, ಗುತ್ತಿನ ಬಂಟರು, ಕಾರ್ನಾಡರು, ಮಾರಪ್ಪ-ದಾರು ಮೊದಲಾದವರು ಕಾಣಿಸುತ್ತಾರೆ. ಇವರ ಮೂಲಕ ಗಾಂಧಿ ಸಂಸ್ಕೃತಿಯನ್ನು ಉಳಿಸುವ ಆಶಯ ಇಲ್ಲಿದೆ. ಗಾಂಧಿ ಬರುವಾಗ ಒಂದು ತಯಾರಿ ನಡೆಯುತ್ತದೆ. ಒಂದು ಸಾಮಾಜಿಕ ಪರಿವರ್ತನೆಯನ್ನು ಹೇಳುತ್ತಾ, ವರ್ಣವರ್ಗ ಚಿಂತನೆಯಲ್ಲಿ ಬದಲಾವಣೆಯಾಗಬೇಕಾದ ತುರ್ತನ್ನು ಕಾದಂಬರಿ ಕಟ್ಟಿಕೊಟ್ಟಿದೆ. ವಸಾಹತುಶಾಹಿ ಆಲೋಚನೆಯ ಪ್ರವೇಶವನ್ನು ವಿವಿಧ ಹೋರಾಟಗಳ ಮೂಲಕ ಹಿಮ್ಮೆಟ್ಟುವ ದಿಟ್ಟ ಪ್ರಯತ್ನ ಇಲ್ಲಿ ನಡೆಯುತ್ತದೆ. ಮಾನವೀಯತೆಯ ಪ್ರತಿನಿಧಿಯಾಗಿ ಗಾಂಧಿಯನ್ನು ತುಳುನಾಡಿನ ಜನರು ಸ್ವೀಕರಿಸಿದ್ದಾರೆ.

ಗಾಂಧಿಯೆನ್ನುವುದು ಹಿರಿತನದ ಪಟ್ಟ. ಗಾಂಧಿ ಬರುವಿಕೆಯಲ್ಲಿ ಅಸ್ಪೃಶ್ಯರು ಬದಲಾವಣೆಗೆ ಒಳಗಾಗುತ್ತಾರೆ. ಶ್ರಮ ಸಂಸ್ಕೃತಿಗಳ ಜನರು ತಮ್ಮ ನೆಲೆಯನ್ನು ಕಾಣುತ್ತಾರೆ. ನಮ್ಮ ಸಮಾಜದ ಸಂಸ್ಕೃತಿಯು ಬೆವರಿನ ಮೂಲದಿಂದ ನಿರ್ಮಾಣವಾಗಿದೆ. ಭೂಮಿಯನ್ನು ಮನುಷ್ಯ ಬದುಕಿಗೆ ಒಗ್ಗಿಸಿಕೊಂಡಿರುವುದು ದುಡಿತವೇ. ಅಸಂಖ್ಯಾತ ಕ್ರಿಯೆಗಳ ಮೂಲಕ ಮನುಷ್ಯ ಬದುಕುತ್ತಿದ್ದಾನೆ. ವಿಪರ್ಯಾಸವಾದುದೆಂದರೆ ಈ ಬೆವರಿನ ಜನರನ್ನು ಬುದ್ಧಿಯ ಬಲ ಆಳ್ವಿಕೆ ನಡೆಸಿದೆ. ಹಣ ಬಲ

ಅದನ್ನು ನಿಯಂತ್ರಿಸಿದೆ. ಬೆವರು ಇಲ್ಲಿಂದ ಅಧೀನ ಜಗತ್ತಿನ ಆವರಣದಲ್ಲಿ ಬಂದಿಯಾಯಿತು. ಇದನ್ನು ಕಾದಂಬರಿಯು ವಿವಿಧ ನೆಲೆಗಳಲ್ಲಿ ಕಟ್ಟಿಕೊಡುತ್ತದೆ. ಗಾಂಧಿಯೆನ್ನುವ ಮೌಲ್ಯ ಸಾವಿರಾರು ಶ್ರಮ ಸಂಸ್ಕೃತಿಗಳ ಬದುಕನ್ನು ಕಟ್ಟುತ್ತಾ ಆ ಮೂಲಕ ಸಾಮಾಜಿಕ ಮತ್ತು ಪ್ರಾದೇಶಿಕ ಒಳ ವ್ಯವಸ್ಥೆಗಳಾದ ಜಾತಿ, ವೃತ್ತಿ, ಸಂಪ್ರದಾಯಗಳನ್ನು ಅನುಭವದ ಕಣ್ಣಿಂದ ನೋಡಲು ಸಾಧ್ಯವಾಗಿದೆ. ದೇವಾಲಯದ ಪ್ರವೇಶ, ವೃತ್ತಿಗೆ ಸಾಮಾಜಿಕ ಘನತೆ, ಕಲೆಗಳ ಪ್ರೋತ್ಸಾಹ, ಉಳಿಸುವಿಕೆ ಗಾಂಧಿಯ ಮೌಲ್ಯದ ನೆಲೆಯಿಂದ ಕಾದಂಬರಿಯೊಳಗೆ ಸಾಧ್ಯವಾಗುವುದು ಕಾದಂಬರಿಯಲ್ಲಿ ವ್ಯಕ್ತವಾಗಿದೆ.

ಬಂಗಲೆಗಳು, ಗುಡಿಸಲುಗಳ ಜನರನ್ನು ತುಳಿದು, ಆ ಮೂಲಕ ರಚಿತವಾದ ಶ್ರೀಮಂತ ಸೌಧಗಳ ಒಳಗಿರುವ ಕುಟಿಲತೆ ಗಾಂಧಿ ಬರುವಿಕೆಯ ಮೂಲಕ ವ್ಯಕ್ತವಾಗಿದೆ. ದೇವರು, ಧರ್ಮದ ಹೆಸರಿನಲ್ಲಿ ಅಸ್ಪೃಶ್ಯರು ಈ ನೆಲದಲ್ಲಿ ಹಿಂಸೆಯನ್ನು ಅನುಭವಿಸಿದ್ದಾರೆ. ಧರ್ಮದ ಹೆಸರಿನಲ್ಲಿ ವಿಧವೆತನ, ಕೇಶಮುಂಡನ, ಮಡಿ-ಮೈಲಿಗೆ ತುಳುನಾಡಿನಲ್ಲಿ ಅನಾದಿ ಕಾಲದಲ್ಲಿ ಸೃಷ್ಟಿಯಾಗಿದ್ದವು. ಇದು ಸರಿಯಲ್ಲವೆಂಬ ಪ್ರಜ್ಞೆ ಅಸ್ಪೃಶ್ಯರಿಗೂ, ಬಂಟರಿಗೂ ಗೋಚರಿಸಿದಾಗ ಕ್ರಾಂತಿಯಾಗುತ್ತದೆ. ಇಲ್ಲಿಯ ಹೆಚ್ಚಿನ ಪಾತ್ರಗಳು ತಮ್ಮೆಲ್ಲ ನೋವು, ಅಸಮಾನತೆ ಅಭದ್ರತೆಗೆ ಪ್ರಕೃತಿ ಮತ್ತು ದೈವಗಳಿಗೆ ಮೊರೆ ಹೋದವುಗಳು ಎಂಬುದನ್ನು ಕಾಂದಬರಿ ವ್ಯಕ್ತಪಡಿಸುತ್ತದೆ. ಹಕ್ಕುಗಳಿಂದ ವಂಚಿತರಾಗಿ ಮರೆತು ತಟಸ್ಥ ನೆಲೆಯಲ್ಲಿದ್ದ ಕೊರಗರಿಗೆ ಗಾಂಧಿ ಬದಲಾವಣೆಯ ಶಕ್ತಿಯಾಗುತ್ತಾರೆ. ಕೋಣಗಳಿಗೆ, ಕೊರಗರಿಗೆ ವ್ಯತ್ಯಾಸವಿಲ್ಲದೆ ಜೀವಿಸುತ್ತಿದ್ದ ಸ್ಥಿತಿಯಿತ್ತು. ಕಾದಂಬರಿಯ ಪ್ರಮುಖ ಪಾತ್ರಗಳಲ್ಲಿ ಒಂದಾದ ಹೆಬ್ಬಾರರು ವರ್ಗದ ನೆಲೆಯಲ್ಲಿ ಬ್ರಾಹ್ಮಣರು. ಇವರೆಲ್ಲಾ ಶೋಷಣೆಗೆ, ನಿಂದನೆಗೆ ಆಳು ಮಕ್ಕಳು ಗುರಿಯಾದ ಕಾಲವಿತ್ತು. ಬಡತನವನ್ನು ಕರುಣೆಯಲ್ಲಿ ಪೋಷಿಸಿದೆ. ಎಂಜಲೆಲೆ ಆಯುವ, ಬೇಡುವ ಬದುಕಿನ ಮುಂದೆ ಬದುಕುವ ಸ್ಥಿತಿಯನ್ನು ಗಾಂಧಿ ಬರುವ ಮೂಲಕ ಕೊರಗರು ಕಂಡುಕೊಳ್ಳುತ್ತಾರೆ. ಅನಾಥಪ್ರಜ್ಞೆ, ತನ್ನ ಬಗ್ಗೆ ತಾನು ತಿಳಿಯದ ಪಾತ್ರಗಳಾದ ಕೂಸಮ್ಮೊಲಿ, ಪಿಜಿನ ಮೂಲ್ಯ, ಅಂತಪ್ಪ, ಕೊರಗರ ಐತು ತಮಗೊಂದು ಕನಸಿದೆ, ಬದುಕಿದೆ ಎಂದು ಈ ಸಂದರ್ಭದಲ್ಲಿ ಗ್ರಹಿಸುತ್ತಾರೆ. ಹರಿಜನರು ವಿಷ್ಣುವಿಗೆ ಹತ್ತಿರವಾದವರೆಂದು ಹೇಳುತ್ತಲೇ ಗಾಂಧಿ ಅವರ ಬದುಕಿಗೆ ಶಕ್ತಿ ತುಂಬಿದವರು. ಗಾಂಧಿಯು ಕುಟುಂಬ ಜೀವನಕ್ಕೆ, ಗ್ರಾಮ ಜೀವನಕ್ಕೆ ಪ್ರಾಮುಖ್ಯತೆಯನ್ನು ಕೊಟ್ಟಿರುವುದನ್ನು ಇಲ್ಲಿ ಗಮನಿಸಬಹುದು. ಇದು ಕಾದಂಬರಿಯ ಅಭಿವ್ಯಕ್ತಿಯ ಮೂಲ ಶಕ್ತಿಯಾಗಿದೆ.

ಗಾಂಧಿಯು ವ್ಯಕ್ತಿಮೌಲ್ಯದ ಪ್ರತಿನಿಧಿಸುವಿಕೆಯಲ್ಲಿ ಮಿಲನ, ಸೇರುವಿಕೆ, ವಿಸ್ತರಿಸುವಿಕೆ, ಬಿಡುಗಡೆ, ಸ್ವಾವಲಂಬನೆ, ಸಹಜೀವನಗಳ ಸಂಕೇತವಾಗಿ ಕಾಣಿಸಿಕೊಂಡಿದ್ದಾರೆ. ಒಗ್ಗಟ್ಟು, ದೇಶ, ನೆಲ ವಿಶಾಲ ನೆಲೆಯಲ್ಲಿ ಇಲ್ಲಿ ಗ್ರಹಿತವಾಗಿದೆ. ಗಾಂಧಿ ಬರುವಾಗ ಉಡುಪಿ, ಬಂಟ್ವಾಳ, ಮೂಲ್ಕಿ, ಕಾರ್ಕಳ, ಕುಂದಾಪುರ, ಪುತ್ತೂರು, ಕಾಸರಗೋಡಿನಿಂದ ಜನರು ಬರುತ್ತಿರುವುದು, ಆ ಮೂಲಕ ಒಂದು

ಸಾಮರಸ್ಯ ನಿರ್ಮಾಣವಾಗಿರುವುದನ್ನು ಕಾಣಬಹುದು. ಗಾಂಧಿಯು ಮಂಗಳೂರಿನ ನೆಹರು ಮೈದಾನಕ್ಕೆ ಬರುವ ಸಂದರ್ಭದಲ್ಲಿ ಆಳುಮಕ್ಕಳು ದುಡಿತಕ್ಕೆ ರಜೆ ಹಾಕಿ ಬರುವ ಸಂದರ್ಭ ಸೃಷ್ಟಿಯಾಗಿದೆ. ಸ್ಪರ್ಶಾಭಾವವನ್ನು ಪಡೆಯುವ ಅವಕಾಶ ಇವರಿಗೆ ದೊರೆತಿದೆ. ವಿವಿಧ ಧರ್ಮದ ಬ್ಯಾಂಡು, ವಾದ್ಯ, ಹಾಡು, ಭಜನೆಗಳು ಒಂದಾಗಿ ಬೆರೆಯಲು ಸಾಧ್ಯವಾಗಿದೆ. ನೂರು ವರ್ಷಗಳ ಹಿಂದೆ ಇದ್ದ ಮೌಢ್ಯಗಳನ್ನು ಮೀರಿ ಸಾಂಸ್ಕೃತಿಕ ಸಾಮರಸ್ಯವನ್ನು ತಿಳಿಯುವುದು ಗಾಂಧಿಯ ಆಗಮನದ ನೆಲೆಯಿಂದ ಸಾಧ್ಯವಾಗಿದೆ. ಬಡವ-ಬಲ್ಲಿದ ಬೇಧವನ್ನು ಮೀರಿದ್ದು ಅತ್ಯಂತ ಮುಖ್ಯ ವಿಚಾರವಾಗಿದೆ. ಈ ಆಗಮನವು ಜನರಲ್ಲಿ ಮಹತ್ತರವಾದ ಜವಾಬ್ದಾರಿಯನ್ನು ಉಂಟು ಮಾಡಿತ್ತು.

ಮನುಷ್ಯ ಸಂಬಂಧಗಳು ಸೊರಗಿದ ಕಾಲವದು. ಸಮಾನತೆ, ಸ್ವಾತಂತ್ರ್ಯದ ಪರಿಕಲ್ಪನೆಗಳು, ಹಕ್ಕುಗಳು, ಕೆಳಜಾತಿಯ ಹೆಣ್ಣು-ಗಂಡುಗಳು ಸಮಾಜದ ಕೇಂದ್ರ ಸ್ಥಾನಕ್ಕೆ ಬರಬೇಕಾದ ಅಗತ್ಯವನ್ನು ಕಾದಂಬರಿಯು ತಿಳಿಸಿದೆ. ಒಡೆಯ-ಆಳಿನ ಚಿತ್ರಣವನ್ನು ಮೀರಿ ಭೂಸುಧಾರಣೆ ಜಾರಿಗೆ ಬರಬೇಕಾದ ಬೇಡಿಕೆಯಿದೆ. ಇಲ್ಲಿ ಧಾರ್ಮಿಕ ಸಾಮರಸ್ಯ, ಆರ್ಥಿಕ ಸಾಮರಸ್ಯ, ನಿಗದಿತ ಕೂಲಿ, ಪಾನ ನಿರೋಧ, ವಿಧವಾ ಮರುವಿವಾಹ, ಭೂತ-ಕೋಲಾದಿಗಳಲ್ಲಿ ಒಟ್ಟಾಗಿ ಭಾಗವಹಿಸುವಿಕೆ, ಸಹಪಂಕ್ತಿಯಲ್ಲಿ ಒಂದಾಗುವ ಅವಕಾಶ ಲಭ್ಯವಾಯಿತು. ಇದಕ್ಕೆ ಗಾಂಧಿ ಕಾರಣರಾದರು. ಗಾಂಧಿಯ ಸಂಕೇತದ ಮೂಲಕ ಇವರು ಸಾಮರಸ್ಯವನ್ನು ಪಡೆದರು.

ಗಾಂಧಿ ಬರುವುದರ ಮೂಲಕ ಎರಡು ಜಾತಿ ವರ್ಗದವರೂ ಒಂದಾಗಿದ್ದಾರೆ. ಅಸ್ಪೃಶ್ಯರು, ಬಂಟರು ಬ್ರಾಹ್ಮಣ್ಯವನ್ನು ಪ್ರಶ್ನೆ ಮಾಡಿದ್ದಾರೆ. ಒಂದು ಮೌಲ್ಯ ಪ್ರವೇಶವಾದಾಗ ಬಂಟರು ಬ್ರಾಹ್ಮಣರಿಂದ ಬಿಡಿಸಿಕೊಳ್ಳುವುದನ್ನು ಇಲ್ಲಿ ಗಮನಿಸಲಾಗಿದೆ. ಇದು ಸಾಮಾಜಿಕ ಸಂರಚನೆಯ ಬದಲಾವಣೆಗೆ ಮುಖ್ಯ ಕಾರಣವಾಗಿದೆ. ಧರ್ಮದ ಪಾವಿತ್ರ್ಯತೆಯೂ ತತ್ವಗಳಲ್ಲಿ ಕುಸಿದಿದೆ. ಗಾಂಧಿ ಬರುವ ವಿಷಯವು ಖಾದಿ ಮಾರಾಟದ ಪ್ರಚಾರವನ್ನು ಹೆಚ್ಚಿಸಿದೆ. ಖಾದಿ ಮಾರಾಟ ಚಪ್ಪರದಡಿಯಲ್ಲಿ ವಿಧವೆ ದ್ರೌಪದಿಯ ಮರುಮದುವೆ ಮಾಡಿಸಲಾಗುತ್ತದೆ.

ಉಪ್ಪಿನ ಸತ್ಯಾಗ್ರಹ, ಸ್ವದೇಶೀ ಚಳುವಳಿಗಳು ಭರದಿಂದ ನಡೆಯುತ್ತಿದೆ. ಮನುಷ್ಯತ್ವ, ಅಹಿಂಸೆ, ಸಹನೆ, ಕರ್ತವ್ಯ ಪ್ರಜ್ಞೆ, ಸಹಾಯ, ಕಾಣಿಕೆಗಳೆಲ್ಲ ಗಾಂಧಿಯ ಮೌಲ್ಯವಾಗಿದೆ. ಹಿಂದಿನ ಸಂಸ್ಕೃತಿಯನ್ನು ಅರ್ಥ ಮಾಡಿಕೊಂಡು ಕಪ್ಪು-ಬಿಳುಪು ಸಂಬಂಧಗಳನ್ನು ವರ್ಣ ಮೈತ್ರಿಯ ಮೂಲಕ ನಿರ್ಮಿಸುವುದಾಗಿ ತಿಳಿಸುತ್ತಾರೆ. ಒಡೆದು ಆಳುವ ಧರ್ಮದ ಒಳಸಂಚನ್ನು, ಹುನ್ನಾರಗಳನ್ನು ಒಡೆದು ರಕ್ಷಣೆ, ಪೋಷಣೆ, ಜವಾಬ್ದಾರಿ, ಕಾಳಜಿಯ ನೆಲೆಯಲ್ಲಿ ಕಟ್ಟುವ ಸಾಂಕೇತಿಕ ಸಂದರ್ಭಗಳ ಶಕ್ತಿಯಾಗಿ ಗಾಂಧಿ ಬರುವಿಕೆಯನ್ನು ತುಳುನಾಡಿನ ಜನರು ಸ್ವೀಕರಿಸಿದ್ದಾರೆ. ಸ್ವಂತಿಕೆಯ ಸಂದರ್ಭ ಕಣ್ಮರೆಯಾದಾಗ, ಹುಡುಕಾಟ, ಮೌಲ್ಯಗಳ ಕಟ್ಟುವಿಕೆಯು ಮನುಷ್ಯ ಹೋರಾಟದ ಪ್ರವೃತ್ತಿಯಾಗಿದೆ.

ಗುಂಪಲ್ಲಿದ್ದರೂ ಗುಂಪಾಗದ ಸ್ಥಿತಿಯನ್ನು ಮೌಲ್ಯಗಳು ಒಡೆದಿವೆ. ಸತ್ತ ಮನೆಗೆ ಸರಕುಗಳ ಒಯ್ಯುವ ಕೊರಗರ ಶ್ರಮಕ್ಕೆ, ಜಾತಿ ಪ್ರಶ್ನೆಯಾಗಲೇ ಇಲ್ಲ. ಹೊಲದಲ್ಲಿ ದುಡಿಯುವ ಜೀವಗಳಾದಾಗ ಮೈಲಿಗೆಯಾಗಿಲ್ಲ. ಮಕ್ಕಳಿಲ್ಲದಿದ್ದರೆ ಮೇಲ್ಜಾತಿಯವರು ಕೊರಗರ ಕೈಗೆ ಕೊನೆಗೊಮ್ಮೆ ಹುಟ್ಟಿದ ಮಗುವನ್ನು ವರ್ಗಾಯಿಸಿ ಪಡೆದುಕೊಳ್ಳುವ ನಂಬಿಕೆಗಳಿಗೆ ಅಸ್ಪೃಶ್ಯತೆಯಿಲ್ಲ. ಈ ಎಲ್ಲಾ ತೀಕ್ಷ್ಣ ಸನ್ನಿವೇಶಗಳು ಮೌಲ್ಯಗಳೊಂದಿಗೆ ಬದಲಾವಣೆಯನ್ನು ಪಡೆದುಕೊಳ್ಳುತ್ತವೆ. ಇದಕ್ಕೆ ಗಾಂಧಿ ಕಾರಣರಾಗಿದ್ದಾರೆ, ಸಂಕೇತವಾಗಿದ್ದಾರೆ.

ಗಾಂಧಿ ಮೌಲ್ಯವು ಶ್ರಮ ಸಂಸ್ಕೃತಿಗಳ ಬದುಕನ್ನು ಕಟ್ಟುತ್ತದೆ. ಪ್ರಾದೇಶಿಕ ಒಳ ವ್ಯವಸ್ಥೆಯ ರಚನೆಯಾದ ಜಾತಿ, ವೃತ್ತಿ, ಸಂಪ್ರದಾಯಗಳನ್ನು ನಿಭಾಯಿಸುವ ಹೊಣೆಗಾರಿಕೆಯನ್ನು ನಿರ್ವಹಿಸಿದೆ. ಕಾರ್ನಾಡರ ಮೂಲಕ ಗಾಂಧಿ ಮೌಲ್ಯ ಪ್ರವೇಶವಾಗಿದೆ. ಹೋರಾಟಗಾರ, ಗಾಂಧಿವಾದಿ ಮಾರಪ್ಪ ಜನಸಾಮಾನ್ಯರಿಗೆ ಜನನಾಯಕನಾಗಿ ಬರುತ್ತಾನೆ. ಪಾನ ನಿಷೇಧದಂತಹ ಕಾಯಿದೆ ಜಾರಿಗೆ ಬರುತ್ತದೆ. ಒಡೆಯರಿಗೂ, ಆಳುಗಳಿಗೂ ಈ ಸಂದರ್ಭದಲ್ಲಿ ಅಂತರ ಮೂಡುತ್ತದೆ. ತಮ್ಮ ಸಮಸ್ಯೆಗಳನ್ನು ಕುಡಿದು ಮರೆಯುವ ಅಂಗರಮೂಲ್ಯ, ಕೂಸಮ್ಮೈಲಿ, ಓಜಿನಮೂಲ್ಯ ಕುಡಿಯುವುದರ ಬಗ್ಗೆ ವಿರೋಧ ವ್ಯಕ್ತಪಡಿಸಿದ್ದಾರೆ. ಪಾನ ನಿಷೇಧವು ದುಡಿಯುವ ವರ್ಗದ ಕಲ್ಯಾಣದ ನೆಲೆಯಲ್ಲಿ ಕಾಣಿಸಿಕೊಂಡಿದೆ. ಪರದೇಶಿ ಬಟ್ಟೆಗಳನ್ನು ತಿರಸ್ಕರಿಸಿ ಸ್ಥಳೀಯ ನೆಲೆಯಿಂದ ಬಟ್ಟೆಗಳನ್ನು ಉತ್ಪಾದಿಸುವ ಕೆಲಸ ಕಾರ್ನಾಡರ ಕುಟುಂಬದಲ್ಲಿ ಮೊದಲು ನಡೆಯುತ್ತದೆ. ಜನರು ಮಂಗಳೂರನ್ನು ನೋಡಿದ ನಂತರದ ದಿನಗಳಲ್ಲಿ ಪೇಟೆಗೆ ಬರಲು ಪ್ರಾರಂಭಿಸಿದ್ದಾರೆ. ಹೊಸ ಹೊಸ ಉದ್ಯೋಗಗಳನ್ನು ಕಂಡುಕೊಂಡಿದ್ದಾರೆ. ಬೀಡಿ ಕಟ್ಟುವುದು, ಕಾರ್ಖಾನೆಯಲ್ಲಿ ದುಡಿಯುವುದು ಸಾಧ್ಯವಾಗಿದೆ. ಹೀಗೆ ಗಾಂಧಿ ಬರುವ ನೆಲೆಯಲ್ಲಿ ಆರ್ಥಿಕ ಕ್ರಾಂತಿಯು ನಡೆದು ಹೋಗುತ್ತದೆ. ಹಣದ ಪ್ರಪಂಚ ಮಾತು ಕಲಿಸಿದೆ. ಮಾತು ಸ್ವಾತಂತ್ರ್ಯದ ಅರ್ಥ ಕಂಡುಕೊಂಡಿದೆ. ಧರ್ಮದ ಕಟ್ಟಳೆಗಳನ್ನು ಮೀರಿದೆ. ಹೀಗೆ ಸಾಮಾಜಿಕವಾಗಿ, ಧಾರ್ಮಿಕವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಸಮಾಜದ ಹೃದಯಭಾಗಕ್ಕೆ ಬರಲು ಕೊರಗರಿಗೆ ಸಾಧ್ಯವಾಗಿದೆ. ಹೀಗೆ ಆದ ಸ್ಥಿತ್ಯಂತರವು ಗದ್ದೆಪುಣಿಯಿಂದ ಅಂಗಳಕ್ಕೆ, ಅಂಗಳದಿಂದ ಜಗಲಿಗೆ ಪ್ರವೇಶ ದೊರಕಿಸಿ ಕೊಟ್ಟಿದೆ. ಇದರ ಜೊತೆಗೆ ಆಳುವ–ಉಳುವ ವರ್ಗದೊಂದಿಗೆ ಅಂತರ ಹೆಚ್ಚಾಗಿದೆ. ಕೂಲಿ ಮಾಡಲು ಶ್ರೀಮಂತ ವರ್ಗಕ್ಕೆ ಶ್ರಮಿಕರ ಕೊರತೆಯುಂಟಾಗಿದೆ. ಇದರಿಂದ ವೇತನದಲ್ಲಿ ಹೆಚ್ಚಳವಾಗಿದೆ. ಹೆಣ್ಣು ಮಕ್ಕಳು ಉದ್ಯೋಗ ಪಡೆದುಕೊಳ್ಳುವ ಸಾಧ್ಯತೆ ಹೆಚ್ಚಾಗಿದೆ. ಹೀಗೆ ಅಸ್ಪೃಶ್ಯರ ಬದುಕಿನ ಸುತ್ತ ನಿರ್ಮಿತವಾದ ಜಟಿಲತೆಗಳು ಕಡಿಮೆಯಾಗಿವೆ. ಶೂದ್ರರ ಮಾತನಾಡುವ ಹಕ್ಕನ್ನು ಕಾದಂಬರಿಯೊಳಗೆ ಮೇಲ್ಜಾತಿ ಕಿತ್ತುಕೊಂಡಿತು. ಅದು ಈಗ ದೊರೆತಿದೆ.

ಗಾಂಧಿ ಬರುವಿಕೆಯ ಹಿನ್ನೆಲೆಯಲ್ಲಿ ವಿಧವಾ ಸಮಸ್ಯೆಗೆ ಮುಕ್ತಿ ನೀಡಲಾಗಿದೆ. ಗಾಂಧಿಯವರು ಮೊದಲ ಬಾರಿಗೆ ಮಂಗಳೂರಿಗೆ ಬಂದಾಗ ದ್ರೌಪದಿ–ಅದ್ರಾಮರಲ್ಲಿ ಪ್ರೇಮ ಹುಟ್ಟಿತು. ಎರಡನೇ

ಬಾರಿ ಬಂದಾಗ ಬೆಳೆದು ಹೆಮ್ಮರವಾಗಿತ್ತು. ಮೂರನೇ ಸಲ ಬಂದಾಗ ಅದ್ರಾಮನೊಂದಿಗೆ ಮದುವೆಯಾಗಿ ಮತ್ತೆ ವಿಧವೆಯಾಗಿದ್ದಾಳೆ. ಹೀಗೆ ಬಂದ ಗಾಂಧಿಗೆ ದ್ರೌಪದಿ ಹಾಗೂ ಕಾದಂಬರಿಯ ಇನ್ನೊಂದು ಪಾತ್ರವಾದ ದಾರು ಒಡವೆಗಳನ್ನು ನೀಡುತ್ತಾರೆ. ಅದ್ರಾಮನು ಮರಣ ಹೊಂದಿದ ವಿಷಯ ಗಾಂಧಿಗೆ ತಿಳಿದಿರುತ್ತದೆ. ಗಾಂಧಿ ಆಕೆಯ ಹಣೆಗೆ ಕುಂಕುಮ ಇರಿಸಿ, ಕುತ್ತಿಗೆಗೆ, ಮೂಗಿಗೆ ಆಭರಣ, ತಲೆಗೆ ಹೂವು ತೊಡಿಸಿ ಅದ್ರಾಮನ ಕನಸನ್ನು ಈಡೇರಿಸುತ್ತಾರೆ. ಹುಟ್ಟಿನಿಂದ ಜೊತೆಗೆ ಬಾರದ ಬಳೆಗಳನ್ನು ಕೊಟ್ಟು ಹೆಣ್ತನವನ್ನು ಹೇರಿದ್ದು ಈ ಸಮಾಜವೇ. ಅದನ್ನು ಸಾಮಾಜಿಕ ನೆಲೆಯಿಂದ ಸಹಜವೆಂದು ಹಿಂದೂ ಸಂಸ್ಕೃತಿಯನ್ನು ಪಾಲಿಸುವ ಸ್ತ್ರೀಯರು ಒಪ್ಪಿಕೊಂಡದ್ದು ತುಳುನಾಡಿನಲ್ಲಿಯೇ. ಪುನಃ ವಿಧವೆಯಾದಾಗ ಹೆಣ್ಣಿನಿಂದ ಕಿತ್ತುಕೊಂಡ ಸಂಸ್ಕೃತಿಯೂ ಇಲಿದೆ. ಈ ಧರ್ಮದ ಒಳಗೆ ಹೆಬ್ಬಾರರ ತಾಯಿಯಾದ ವೈದಿಕ ಅಮುಣಿಯಮ್ಮನೂ ಈ ನೋವನ್ನೆ ಅನುಭವಿಸಿರುವುದು ಅಷ್ಟೇ ಸತ್ಯ. ಆದರೆ ಹೆಬ್ಬಾರರ ಮಗಳು ದ್ರೌಪದಿಗೆ ಈ ರೀತಿಯ ಮೌಲ್ಯಗಳ ಪ್ರವೇಶ ಹೊಸ ಬದುಕನ್ನು ಕೊಟ್ಟಿದೆ. ಅದ್ರಾಮನು ಪ್ರೀತಿ ಮತ್ತು ಸಾವು ಮಾತ್ರ, ದೇವರ ಸ್ಥಾನವನ್ನು ತುಂಬಬಲ್ಲದೆಂದು ನಂಬಿದವನು. ಹೀಗೆ ಗಾಂಧಿಯ ಪ್ರವೇಶ ಹೊಸ ಸಂದೇಶವನ್ನು ಕಾದಂಬರಿಗೆ ನೀಡಿದೆ. ಮದುವೆ ಒಪ್ಪಂದವಲ್ಲ. ಅದು ಆಂತರಿಕ ಒಳ ಸೂಕ್ಷ್ಮ ಸಂಬಂಧಗಳೆಂಬುವುದು ಇಲ್ಲಿ ವ್ಯಕ್ತವಾಗಿದೆ. ಸುರಗಿ ಮಠದಲ್ಲಿ ದ್ರೌಪದಿ ಅನುಭವಿಸಿದ ನೋವಿನ ಸರದಿಯೇ ಇದೆ. ಸುರಗಿ ಮಠದ ಧರ್ಮದ ಕೋಟೆ ಒಡೆಯುವಾಗ ಆಕೆಯ ಕನಸುಗಳು ಸಾವು ಬದುಕಿನ ಜೊತೆ ಹೋರಾಟ ನಡೆಸಿವೆ. ಸಾಂಸ್ಕೃತಿಕ ಒಳ ಸಂಘರ್ಷದಲ್ಲಿ ದ್ರೌಪದಿ ಬದುಕು ಒಂದು ಅರ್ಥವನ್ನು, ಮೌಲ್ಯವನ್ನು ಪಡೆದುಕೊಂಡಿದೆ. ಇಂತಹ ಸಂದರ್ಭದಲ್ಲಿಯೇ ತುಳುನಾಡಿಗೆ ಗಾಂಧಿ ಬಂದು ಹೋದರು.

ಗಾಂಧಿ ಮೌಲ್ಯ ತುಳುನಾಡಲ್ಲಿ ಜನರ ಬದುಕಿಗೆ ಎಚ್ಚರವನ್ನು ನೀಡಿತು. ಗಾಂಧಿ ತತ್ವಗಳ ಅನುಷ್ಠಾನವಾಯಿತು. ಸ್ವಾತಂತ್ರ್ಯ ಚಳುವಳಿಯಲ್ಲಿ ಸಾವನ್ನು ಅಪ್ಪಿದ ಅದ್ರಾಮನ ಹೆಂಡತಿಗೆ ಪುನಃ ಪುನಃ ಮುತ್ತೈದೆ ಭಾಗ್ಯವನ್ನು ನೀಡಿ ವಿಧವಾ ಸಮಸ್ಯೆಯನ್ನು ತೊಡೆದು ಹಾಕಲಾಗಿದೆ. ಬಾಲ್ಯ ವಿವಾಹ, ವಿಧವಾ ವಿವಾಹ ವಿರೋಧ ಇವು ಸಮಾಜ ಪೋಷಿಸಿಕೊಂಡು ಬಂದ ಅನಿಷ್ಟ ಪದ್ಧತಿಗಳು. ಹುಟ್ಟುತ್ತಾ ಹೆಣ್ಣು ಮಗಳಿಗೆ ಗೊಂಬೆಯನ್ನು ನೀಡಿ, ಹಾಡು-ಹಸೆ-ಕಲೆಯಲ್ಲಿ ಪಳಗಿಸಿದ ಸಂಸ್ಕೃತಿ ಇಲ್ಲಿಯದು. ಬೆಳೆಯುತ್ತಾ ಋತುಮತಿಯಾದಾಗ 'ನೆರೆದ ಮದುವೆ' ಮಾಡಿಸಿ ಬಳೆ, ಬೊಟ್ಟು ನೀಡಿ ಆಕೆಯನ್ನು ಮದುವೆಗೆ ಸಿದ್ಧ ಮಾಡುವ ಕುಟುಂಬ ಜೀವನ ಇಲ್ಲಿಯದು. ಮದುವೆಯಾದ ನಂತರ ವಿಧವೆಯಾದರೆ ಅದೇ ಅರಶಿಣ, ಕುಂಕುಮ, ತಾಳಿಯನ್ನು ಕಿತ್ತುಕೊಳ್ಳುವ ಸಾಮಾಜಿಕ ರಚನೆ ನಮ್ಮ ಮುಂದಿನದ್ದು. ಇಂತಹ ಎಲ್ಲಾ ಅಲೋಚನೆಗಳನ್ನು ಹೆಚ್ಚಿನ ಸ್ತ್ರೀ ಪಾತ್ರಗಳ ನೆಲೆಯಿಂದ ವಿಶ್ಲೇಷಿಸಲಾಗಿದೆ. ಇದರ ಬದಲಾವಣೆಯ ಸಾಧ್ಯತೆಗಳನ್ನು ಗಾಂಧಿಯ ಮೂಲಕ ವಿವರಿಸಲಾಗಿದೆ.

ಆಳುವ ವರ್ಗದ ಸೋಲು, ಊಳುವ ವರ್ಗದವರಿಗೆ ಒಂದು ವೇದಿಕೆಯನ್ನು ನಿರ್ಮಿಸಿದೆ. ಜಮೀನ್ದಾರಿ ಪದ್ಧತಿಯಿಂದ ಬಂದ ಚಾಲಗೇಣಿ, ಮೂಲಗೇಣಿ ಅಸ್ಥಿತ್ವ ಕಳೆದುಕೊಳ್ಳುತ್ತದೆ. ಸ್ವಂತ ಭೂಮಿಯನ್ನು ಕೊರಗರು ಪಡೆಯಲು ಸಾಧ್ಯವಾಗುತ್ತದೆ. ಶ್ರಮಿಕ ವರ್ಗದವರು ಎಚ್ಚೆತ್ತುಕೊಂಡಿದ್ದಾರೆ. ವರ್ಣ–ವರ್ಗ ಚಿಂತನೆಗಳು, ದುಡಿಮೆಯಲ್ಲಿ ಬದಲಾವಣೆಯಾಗಬೇಕಾದ ತುರ್ತನ್ನು ಕಾದಂಬರಿ ಮುಂದಿಡುತ್ತದೆ. ಒಂದು ಮದುವೆಯ ಸಂದರ್ಭ ಎರಡು ಕೋಮುಗಳನ್ನು ಒಂದು ಮಾಡುತ್ತದೆ. ಬಂಜೆ ದಾರುವಿನ ಬದುಕಿನಲ್ಲಿ ಮಾರಪ್ಪ ಆಕೆಯ ಗಂಡನಾಗಿ ಬಂದಿರುವುದು ಗಾಂಧಿ ಮೌಲ್ಯದ ಅನುಷ್ಠಾನವೇ ಆಗಿದೆ. ಹೀಗೆ ಗಾಂಧಿ ಶೂದ್ರ ಜನಾಂಗದಲ್ಲಿ ದಾಖಲಾದರು. ಕಾದಂಬರಿಯಲ್ಲಿ ನಡೆಯುವ ಬದಲಾವಣೆಗಳಿಗೆ ಸಂಕೇತವಾದರು.

**ಟಿಪ್ಪಣಿಗಳು:**

1. **ಮಂಜೊಟ್ಟಿ–** ಕಂಬಳದಲ್ಲಿ ಕೋಣಗಳನ್ನು ಓದಿಸಲು ಆರಂಭಿಸುವ ವೇದಿಕೆಯಂತಿರುವ ಎತ್ತರದ ಭಾಗ ಮಂಜೊಟ್ಟಿ.

2. **ಡೋಲು–** ದಲಿತ ವರ್ಗಕ್ಕೆ ಸೇರಿದ ಕೊರಗರು ಬಳಸುವ ಚರ್ಮವಾದ್ಯ. ಡೋಲನ್ನು ಬಡಿಯುತ್ತಾ ಲಯಬದ್ಧವಾಗಿ ಕುಣಿಯುವ ಕುಣಿತಗಳು ಆ ಜನಾಂಗದಲ್ಲಿದೆ.

# ಅಧ್ಯಾಯ – ನಾಲ್ಕು
# ಕಾದಂಬರಿಯಲ್ಲಿ ಗಾಂಧಿಯ ಸಾಂಕೇತಿಕತೆ

ಕಾದಂಬರಿಯಲ್ಲಿ ಗಾಂಧಿಯ ಸಾಂಕೇತಿಕತೆಯನ್ನು ಚರ್ಚಿಸುವ ಮೊದಲು ಅದಕ್ಕೆ ಪೂರಕವಾಗಿ ಗಾಂಧೀಜಿಯವರ ಚಿಂತನೆಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ.

ಸ್ವಾತಂತ್ರ್ಯ ಹೋರಾಟದಲ್ಲಿ ಮಹಾನ್‌ನಾಯಕರಾಗಿ ಹೊರಹೊಮ್ಮಿದ ಗಾಂಧೀಜಿ, ಒಬ್ಬ ವ್ಯಕ್ತಿಯಾಗಿ ಗುರುತಿಸಲ್ಪಡುವುದಕ್ಕಿಂತಲೂ ಹೆಚ್ಚಾಗಿ ಸಮಷ್ಠಿಯ ಶಕ್ತಿಯಾಗಿ ಗುರುತಿಸಲ್ಪಟ್ಟರು. ಗಾಂಧಿಯು ಭಾರತೀಯರ ಮೌಲ್ಯ ಪ್ರಜ್ಞೆಯ ಸಂಕೇತವಾಗಿ ಮೂಡಿಬಂದರು. ದೇಶದ ಜನರು ಸಮಗ್ರವಾಗಿ ಗಾಂಧಿಯನ್ನು ಬದಲಾವಣೆಯ ಮೌಲ್ಯವಾಗಿ ಸ್ವೀಕರಿಸಿದರು. ಎಲ್ಲಾ ವರ್ಗದ ಜನರು ಗಾಂಧಿಯನ್ನು ಈ ನೆಲೆಯಲ್ಲಿ ಗುರುತಿಸಿದ್ದಾರೆ. ದೇಶದ ಸಮಗ್ರತೆ ಮತ್ತು ಸಾಮರಸ್ಯದ ಸಂಕೇತವಾಗಿ ಗಾಂಧಿಯನ್ನು ಕಂಡುಕೊಂಡರು. 'ಗಾಂಧಿವಾದ'ವು ಈ ಅರ್ಥದಲ್ಲಿ ಬೆಳೆಯಿತು. ಗಾಂಧೀಜಿಯವರು ಭಾರತೀಯರನ್ನು ಮತ್ತು ಇಡೀ ಜಗತ್ತನ್ನು ಪ್ರಭಾವಗೊಳಿಸಿದ್ದು ಅವರ ಬರವಣಿಗೆಗಳಿಂದಲ್ಲ. ಅವರ ಜೀವನ ವಿಧಾನ ಮತ್ತು ನಡವಳಿಕೆಗಳು ಪ್ರಭಾವವನ್ನು ಬೀರಿತು. ಭಾರತದ ಎಲ್ಲಾ ವರ್ಗದ ಜನರು ಅವರಿಂದ ಪ್ರಭಾವಿತರಾದರು.

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಕರಾವಳಿ ಪ್ರದೇಶಕ್ಕೆ ಗಾಂಧಿ ಮೂರು ಬಾರಿ ಭೇಟಿ ನೀಡಿದರು. ಇದರಿಂದ ವಿಭಜಿತ ದಕ್ಷಿಣ ಕನ್ನಡದಲ್ಲಿ ಸಹಜವಾಗಿಯೇ ಗಾಂಧಿಯ ಪ್ರಭಾವ ತೀವ್ರವಾಗಿತ್ತು. ಈಗಾಗಲೇ ಸ್ವಾತಂತ್ರ್ಯ ಹೋರಾಟದ ಗಾಂಧಿತತ್ವದಿಂದ ಪ್ರಭಾವಿತರಾದ ಗಾಂಧಿವಾದಿಗಳು ಈ ಪ್ರದೇಶದಲ್ಲಿ ಸುಧಾರಣೆಯ ಚಳವಳಿಯನ್ನು ಆರಂಭಿಸಿದ್ದರು. ಕಾರ್ನಾಡು ಸದಾಶಿವರಾಯರು, ಕುದ್ಮಾಲ್‌ರಂಗರಾಯರಂಥವರು ಶಿಕ್ಷಣ, ಸ್ತ್ರೀ ಸಮಾನತೆ, ಅಸ್ಪೃಶ್ಯತಾ ನಿವಾರಣೆಯಂಥ ಸುಧಾರಣೆಗಳನ್ನು ಚಳವಳಿಯ ಹಂತದಲ್ಲಿ ಆರಂಭಿಸಿದ್ದರು. ಇದು ಕರಾವಳಿಯ ಸಾಮಾಜಿಕ ಜೀವನದ ಮೇಲೆ ಪ್ರಭಾವ ಬೀರಿದೆ. ಗಾಂಧಿಯ ಭೇಟಿ ಇಲ್ಲಿನ ಸಾಮಾಜಿಕ ಸಂರಚನೆಯ ಮೇಲೆ ಪ್ರಭಾವ ಬೀರಿದೆ. ಸಾಮಾಜಿಕ ಸಂರಚನೆಯಲ್ಲಾದ ಬದಲಾವಣೆಗಳನ್ನು **'ಗಾಂಧಿ ಬಂದ'** ಕಾದಂಬರಿಯು ಗಾಂಧಿಯ ಬರುವಿಕೆಯನ್ನು ತಂತ್ರವಾಗಿರಿಸಿ ವಿವರಿಸುತ್ತದೆ. ಇದು ಕಾದಂಬರಿಯ ಆಶಯವಾಗಿದೆ. ಗಾಂಧಿಯನ್ನು ಸಾಂಕೇತಿಕವಾಗಿ ಕಾದಂಬರಿಯಲ್ಲಿ ಬಳಸಲಾಗಿದೆ.

ಕಾದಂಬರಿಯ ವಿಚಾರಗಳಿಗೆ ಪೂರಕವಾಗಿ ಗಾಂಧಿ ತತ್ವ-ಚಿಂತನೆಗಳನ್ನು ಸರಳವಾಗಿ ಹೀಗೆ ಸಂಗ್ರಹಿಸಬಹುದು. ಈ ತತ್ವ ಚಿಂತನೆಗಳು ಗ್ರಾಮೀಣ ಬದುಕಿನ ಮೇಲೆ ಬೀರಿದ ಪ್ರಭಾವವು ಕಾದಂಬರಿಯಲ್ಲಿ ವ್ಯಕ್ತವಾಗಿದೆ.

ಗಾಂಧಿಯ ಮೂರು ಧ್ಯೇಯಗಳು ಮುಖ್ಯವಾದವುಗಳು. ಹಿಂದು ಮುಸ್ಲಿಂ ಐಕ್ಯತೆ, ಅಸ್ಪೃಶ್ಯತೆಯ ನಿವಾರಣೆ, ಖಾದಿ ಉತ್ಪಾದನೆ. ಗಾಂಧಿ ತಮಗೊದಗುವ ಸಮಸ್ಯೆಗಳನ್ನು ಮೌನದಿಂದ ಗೆಲ್ಲುತ್ತಿದ್ದರು. ಹಿಂದು ಮುಸ್ಲಿಂ ಐಕ್ಯತೆ ದೇಶದ ಬಹುದೊಡ್ಡ ಶಕ್ತಿಯೆಂದು ತಿಳಿದವರು. ಮಾನವ ಸಂಪನ್ಮೂಲಕ್ಕೆ ಮಹತ್ವ ನೀಡಿದವರು. "ಅಸ್ಪೃಶ್ಯತೆಯು ಜಾತಿ ಪದ್ಧತಿಯ ತಿರಸ್ಕಾರಾರ್ಹವಾದ ಅಭಿವ್ಯಕ್ತಿ" ಎಂದು ತಿಳಿಸಿದರು. ಜಾತಿಯನ್ನು ಕಾನೂನಿನಿಂದ ತಿದ್ದುವುದಲ್ಲ. ಜಾತಿ ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಸುಧಾರಿಸಿಕೊಳ್ಳಬೇಕಾದ ಅನಿವಾರ್ಯತೆ ಇದೆ.

"ದೇಶ ಆರ್ಥಿಕ ಸ್ವಾತಂತ್ರ್ಯವನ್ನು ಗಳಿಸುವುದಕ್ಕೆ ಚರಕ ಹೇಗೆ ಸಾಧನವೋ ಸಮಾಜದ ಉನ್ನತಿಯ ಸಾಧನೆಗೆ ಅಸ್ಪೃಶ್ಯತಾ ನಿವಾರಣೆಯೇ ಬೀಗದ ಕೈ ಸಮಾಜದ ಹಿಂದೂಗಳ ಹೃದಯ ಪರಿವರ್ತನೆಯಾಗದೆ ಈ ಸಮಸ್ಯೆಗೆ ಪರಿಹಾರವಿಲ್ಲ" ಎಂದು ಗಾಂಧೀಜಿ ತಿಳಿಸಿದರು. ಹರಿಜನರೊಂದಿಗೆ ವಾಸಿಸಿದರು. ಹರಿಜನ ಮಗುವೊಂದನ್ನು ದತ್ತು ತೆಗೆದುಕೊಂಡರು. ಹರಿಜನ ಹೆಸರಿನಲ್ಲಿ ಪತ್ರಿಕೆಯೊಂದನ್ನು ಸ್ಥಾಪಿಸಿ ಆ ಮೂಲಕ ಜನರಿಗೆ ಮಾಹಿತಿ ನೀಡಿದರು. ಭಾರತೀಯ ಸಮಾಜದಲ್ಲಿ ಶತಮಾನಗಳಿಂದ ಆಗದ ಬದಲಾವಣೆಯನ್ನು ಕೆಲವೇ ವರ್ಷಗಳಲ್ಲಿ ಸಾಧಿಸಿದರು. ಪೂರ್ತಿ ವ್ಯವಸ್ಥೆ ಬದಲಾಗದಿದ್ದರೂ ದಲಿತರು ಸಾರ್ವಜನಿಕ ಸ್ಥಳ, ದೇವಾಲಯ, ಶಿಕ್ಷಣ ಸಂಸ್ಥೆಗಳಿಗೆ ಪ್ರವೇಶ ಪಡೆದುಕೊಂಡಿರುವುದು ಮಹತ್ವದ ಬದಲಾವಣೆಯಾಗಿದೆ. ಗಾಂಧಿಯ ಪರಮ ಧ್ಯೇಯಗಳಲ್ಲಿ ಒಂದಾದ ಖಾದಿಯು ಸ್ವಾವಲಂಬನೆ, ಸ್ವದೇಶಿ ಕಲ್ಪನೆಯನ್ನು ಕಟ್ಟಿಕೊಡುತ್ತದೆ. ಆರ್ಥಿಕ ಸ್ವಾತಂತ್ರ್ಯ ಮೂಲಭೂತ ಬೇಡಿಕೆಗಳನ್ನು ಈಡೇರಿಸಲು ಸಾಧ್ಯ ಎಂಬುದು ಇಲ್ಲಿಯ ತತ್ವವಾಗಿದೆ.

ಜಗತ್ತು ಜಡವಾದುದಲ್ಲ. ಅದು ನಿತ್ಯಪರಿವರ್ತನಾಶೀಲವಾದದು. ಆ ಪರಿವರ್ತನೆಗೆ ಸರಿಯಾಗಿ ತತ್ವಗಳ ಸ್ವರೂಪ ಬದಲಾಗುತ್ತಿತ್ತೆಂಬುದು ಇವರ ಅಭಿಮತ. ಅವರ ನೇರ, ಸರಳ, ನುಡಿದಂತೆ ನಡೆಯುವ ವ್ಯಕ್ತಿತ್ವ ಗ್ರಾಮೀಣ ಜನರನ್ನು ಸೆಳೆಯಿತು.

ಗಾಂಧಿಯವರು ಜಾತೀಯತೆ ಮತ್ತು ಅಸ್ಪೃಶ್ಯತೆಗಳು ಭಾರತಮಾತೆಯ ದೇಹಕ್ಕೆ ಅಂಟಿಕೊಂಡು ಬಂದಿರುವ ಮಾರಕ ರೋಗವೆಂದು ಹೇಳಿದರು. ಜಗತ್ತಿನ ಮಹಾ ಮಾನವತಾವಾದಿಯಾದ ಗಾಂಧಿ ರಾಷ್ಟ್ರ ಸ್ವಾತಂತ್ರ್ಯಕ್ಕಿಂತ ಮುಖ್ಯವಾಗಿ ವ್ಯಕ್ತಿ ಸ್ವಾತಂತ್ರ್ಯ, ಆಧ್ಯಾತ್ಮಿಕ ಸ್ವಾತಂತ್ರ್ಯಕ್ಕೆ ಮಹತ್ವವನ್ನು ನೀಡಿದರು. ಬೋಧನೆಯಂತೆ ಬದುಕಿದಾಗ ಮಾತ್ರ ತತ್ವಗಳು ಜೀವಂತವಾಗಿ ಇರುತ್ತವೆಯೆಂದು ಗಾಂಧಿಯವರ ಖಚಿತ ನಂಬಿಕೆಯಾಗಿತ್ತು.

ಸಿಕಿಗಪ್ಪ ಗ್ರಂಥಾಲಯ
ಕ ಜ ವಿಶ್ವವಿದ್ಯಾಲಯ. ಶಿಂಶ.

ಮಹಿಳಾ ಸಮಾನತೆಯ ಬಗ್ಗೆ ಗಾಂಧಿಯ ದೃಷ್ಟಿಕೋನ ವಿಶಿಷ್ಟವಾದುದು. ಎಲ್ಲಾ ಸಮಾಜಗಳಲ್ಲೂ ಪುರುಷನೇ ಶ್ರೇಷ್ಠ ಎಂಬ ಪರಿಕಲ್ಪನೆ ಬೆಳೆದು ಬಂದಿದೆ. ಪಾಲನೆ, ಪೋಷಣೆಗಳನ್ನು ನಿರ್ವಹಿಸುವ ಹೆಣ್ಣು ನಾಲ್ಕು ಗೋಡೆಗಳ ಒಳಗೆ ಬಂಧಿಯಾಗಿರುವ ಸಂದರ್ಭ ನಮ್ಮ ಇತಿಹಾಸದಲ್ಲಿ ದಾಖಲಾಗಿದೆ. ತೊಟ್ಟಿಲ ತೂಗುವ ಕೈ ಜಗತ್ತನ್ನು ಆಳಬಹುದೆಂಬ ಸತ್ಯ ಗಾಂಧಿಯುವರಿಗೆ ಅರಿವಾಗಿತ್ತು. ಮಹಿಳೆಯರು ಸ್ವತಂತ್ರರಾಗಬೇಕೆಂದರೆ ಅವರು ಭಯವನ್ನು ಬಿಡಬೇಕು. ಸಂಪ್ರದಾಯ ನಂಬಿಕೆಗಳು ಸಮಾಜದಲ್ಲಿ ಮಹಿಳೆಯರ ಧೈರ್ಯವನ್ನು ಕಸಿದಿದೆ. ಪುರುಷರ ಪರವಾದ ಶಾಸ್ತ್ರ ಗ್ರಂಥಗಳನ್ನು ಪುನರ್ ಪರಿಷ್ಕರಿಸಬೇಕೆಂಬ ಗಾಂಧೀಜಿಯವರ ವಾದ ಸ್ತ್ರೀಯರ ಬಗ್ಗೆ ಇರುವ ಕಾಳಜಿಯನ್ನು ತಿಳಿಸುತ್ತದೆ. ವೇಶ್ಯಾವೃತ್ತಿಯ ಅನಿಷ್ಟ ಸಂಪ್ರದಾಯವನ್ನು ಗಾಂಧಿಯವರು ತೀಕ್ಷ್ಣವಾಗಿ ಖಂಡಿಸಿದರು. ಗಾಂಧಿಯ ದೃಷ್ಟಿಯಲ್ಲಿ ಮದುವೆ ತಾಯ್ತನವಷ್ಟೇ ಹೆಣ್ಣಿಗೆ ಮುಖ್ಯವಲ್ಲ. ಅದನ್ನು ಮೀರಿ ಬೆಳೆಯಬೇಕೆಂಬ ಸಂದೇಶ ನೀಡಿದರು. ಇದನ್ನು ಗಾಂಧಿ ಅರಿತು ಹೆಣ್ಣಿನ ಜೀವನಕ್ಕೆ ಮಹತ್ವ ಕೊಟ್ಟರು. ಆಕೆಯ ಶ್ರಮದ ಜೀವನದ ಬಗ್ಗೆ ಅರಿವಿತ್ತು. ಮಹಿಳೆಯ ಆತ್ಮಬಲ ಕಾರ್ಯದಕ್ಷತೆ, ಕ್ರಿಯಾತ್ಮಕ ಗುಣಶೀಲಗಳನ್ನು ಸಮಷ್ಠಿ ನೆಲೆಗೆ ತೊಡಗಿಸದ ರಾಷ್ಟ್ರ ಸೋಲನ್ನು ಅನುಭವಿಸುತ್ತದೆ ಎಂದು ತಿಳಿದವರು. **'ಸ್ತ್ರೀ ಅಬಲೆಯಲ್ಲ ಸಬಲೆ'** ಎಂಬುದನ್ನು ತಿಳಿಸಿ, ರಾಷ್ಟ್ರದ ಸ್ವಾತಂತ್ರ್ಯ ಚಳುವಳಿಯಲ್ಲಿ ಅವರನ್ನು ತೊಡಗಿಸಿಕೊಂಡರು. ಭಾರತದ ಮಹಿಳೆಯರು ರಾಜಕೀಯಕ್ಕೆ ತೊಡಗಿಸಿಕೊಳ್ಳಬೇಕೆಂದು ಅವರ ಆಶಯವಾಗಿತ್ತು. ಭಾರತದ ರಾಷ್ಟ್ರಪತಿ ಸ್ಥಾನಕ್ಕೆ ಹರಿಜನ ಮಹಿಳೆಯ ಆಯ್ಕೆ ಮಾಡಬೇಕೆಂದು ಕನಸು ಕಂಡರು. ಅಪಮಾನ, ನೋವು, ನಿರಾಶೆ, ಸತೀಪದ್ಧತಿ, ಬಾಲ್ಯವಿವಾಹ, ವಿಧವೆಯಶೋಷಣೆ, ವರದಕ್ಷಿಣೆ ಪಿಡುಗು, ಭ್ರೂಣ ಹತ್ಯೆ, ಆರ್ಥಿಕಸೋಲು, ಹೆಣ್ಣಿನ ಸೃಜನಶೀಲತೆಯನ್ನು ನಾಶಪಡಿಸುತ್ತದೆಂದು ತಿಳಿದು ಅವರನ್ನು ಸಮಾಜವಾಹಿನಿಗೆ ಬರುವುದರತ್ತ ಪ್ರೋತ್ಸಾಹಿಸಿದರು. ಭಾರತದ ಸಮಾಜದಲ್ಲಿ ಮಹಿಳಾ ಸಮುದಾಯಕ್ಕೆ ಕಾನೂನು ಕಟ್ಟಳೆಗಳಿಂದ, ಮೌಢ್ಯಗಳಿಂದ, ಸ್ವಾರ್ಥಪರವಾದ ಪುರುಷನ ವಿವೇಚನಾರಹಿತ ವಿಧಾನಗಳಿಂದ ಅನ್ಯಾಯವಾಗಿದೆ ಎಂದು ಖಚಿತವಾಗಿ ನಂಬಿದ್ದರು. ಸ್ವಾತಂತ್ರ್ಯ ಚಳುವಳಿಯಲ್ಲಿ ಅನೇಕ ಮಹಿಳೆಯರು ಅಹಿಂಸಾತ್ಮಕ ಹೋರಾಟಗಳಲ್ಲಿ ತೊಡಗಿಸಿಕೊಂಡರು. ಸೆರಮನೆವಾಸವನ್ನು ಅನುಭವಿಸಿದರು. ಅನೇಕ ಸ್ತ್ರೀಯರ ಪರವಾದ ಚಳುವಳಿಗಳು ಅಸ್ತಿತ್ವ ಪಡೆದುಕೊಂಡವು. ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಗಮನ ನೀಡಲಾಯಿತು. ರಾಷ್ಟ್ರೀಯ ಧ್ಯೇಯ ಸಾಧನೆಗಳಿಗೆ ಹೆಣ್ಣು ಮಕ್ಕಳ ಬೌದ್ಧಿಕ ಶಕ್ತಿಯನ್ನು ಬಳಸಿಕೊಳ್ಳಲಾಯಿತು. ಪ್ರೀತಿ, ಸಂಯಮ, ಕಷ್ಟ ಸಹಿಷ್ಣುತೆಯ ಸ್ವರೂಪವಾಗಿರುವ ಹೆಣ್ಣಿನ ಶಕ್ತಿಯನ್ನು ಕ್ರಿಯಾಶೀಲವಾಗಿ ಬಳಸಿಕೊಂಡಿರುವುದು ಇವರ ಶ್ರೇಷ್ಠ ನಿಲುವಾಗಿದೆ.

130051

ಇಂದಿನ ಜಾಗತೀಕರಣ ಉಂಟುಮಾಡಿರುವ ಅಪಾಯಗಳ ಬಗ್ಗೆ ಗಾಂಧೀಜಿಯವರಿಗೆ ಆಗಲೇ ಎಚ್ಚರವಿತ್ತು. ಇದರಿಂದಲೇ ಸ್ವರಾಜ್ಯ ಗ್ರಾಮಾಭಿವೃದ್ಧಿ ಚಿಂತನೆಗಳ ಸೂತ್ರಗಳನ್ನಿಟ್ಟು ಕಾರ್ಯಗತ ಗೊಳಿಸಲು ಪ್ರಯತ್ನಿಸಿದರು. ಇಂದು ದಕ್ಕಿರುವ ಮೀಸಲಾತಿ, ಅಸ್ಪೃಶ್ಯತೆಯ ನಿವಾರಣೆಯಲ್ಲಿ ಗಾಂಧಿಯ

ಪಾಲಿದೆ. ಗಾಂಧಿ ಪ್ರಕೃತಿಯ ಸಾಧ್ಯಾಸಾಧ್ಯತೆಗಳ ಅರಿವಿದ್ದವರು. ಪ್ರಕೃತಿಯನ್ನು ಹದವರಿತು ಬಳಸಲು ಎಚ್ಚರಿಕೆ ನೀಡಿದವರು. ಇಲ್ಲದಿದ್ದರೆ ಅಪಾಯಗಳನ್ನು ಎದುರಿಸಬೇಕಾಗುತ್ತದೆಯೆಂದು ತಿಳಿಸಿ ತಿಳಿಹೇಳಿದವರು.

ಈ ಎಲ್ಲಾ ಮೌಲ್ಯಗಳಿಂದ ಗ್ರಾಮೀಣ ಪ್ರದೇಶಗಳಲ್ಲಿ ಸೃಜನಾತ್ಮಕವಾಗಿ ಬದಲಾಗುವುದು ವ್ಯಕ್ತವಾಗಿದೆ. ಗಾಂಧಿಯು ವ್ಯಕ್ತಿಯಾಗದೆ ಮೌಲ್ಯಗಳ ಸಂಕೇತವಾಗಿ ಪರಿಗಣಿಸಲಾಗಿದೆ. ಚಾರಿತ್ರಿಕ ಪ್ರಜ್ಞೆಯ ಪ್ರಗತಿಪರ ದೃಷ್ಟಿಕೋನದ ಒಟ್ಟುಮೊತ್ತವಾಗಿ ಗಾಂಧಿ ಕಾಣಿಸಿಕೊಂಡಿದ್ದಾರೆ. ಗಾಂಧಿಯ

ಶಕ್ತಿಯ ನೆಲೆಯಲ್ಲಿ ಬದಲಾವಣೆಯು, ಸಂಕ್ರಮಣಕಾಲದ ಸಾಮಾಜಿಕ ಸಂದರ್ಭಗಳ ಭಾಗವಾಗಿದ್ದಾರೆ. ತುಳುನಾಡಿನ ಮೌಲ್ಯಪ್ರಜ್ಞೆಯಲ್ಲಿ ಬದಲಾವಣೆಗಳಾಗಿ ಇಲ್ಲಿ ತಲೆತಲಾಂತರಗಳಿಂದ ಅಸಮಾನತೆಯಿಂದ ಶೋಷಣೆಗೆ ಒಳಗಾದರು ಎಂದು ಗುರುತಿಸಿದ ಕೊರಗರು, ಸ್ತ್ರೀಯರು ತುಳುನಾಡಿನಲ್ಲಿ ಪಡೆದ ಮಹತ್ವವು ಈ ನೆಲೆಯಲ್ಲಿ ವ್ಯಕ್ತವಾಗಿದೆ. ಈ ದೃಷ್ಟಿಯಿಂದ ಕಾದಂಬರಿಯಲ್ಲಿ ಗಾಂಧಿಯ ಸಾಂಕೇತಿಕತೆ ಈ ರೀತಿ ವ್ಯಕ್ತವಾಗಿದೆ. ಗಾಂಧಿಯ ಸಂಕೇತಿಕತೆಯನ್ನು ಅಭಿವ್ಯಕ್ತ ಗೊಳಿಸುವ ದೃಷ್ಟಿಯಿಂದ **'ಮರಣದ ಡೋಲು ಮಾದಿರ ಕುಣಿತ'** ಎಂಬ ಭಾಗ ಬಹು ಮುಖ್ಯವಾಗಿದೆ. ಈ ಭಾಗದ ಹಿನ್ನೆಲೆಯಲ್ಲಿ ಗಾಂಧಿಯ ಸಾಂಕೇತಿಕತೆ ಹೊಮ್ಮಿಸುವ ಅರ್ಥವನ್ನು ವಿವರಿಸಬಹುದಾಗಿದೆ.

ಗಾಂಧಿ ಬಂದ ಕಾದಂಬರಿ ಪ್ರಾದೇಶಿಕ ಸಂಸ್ಕೃತಿಯ ದೃಷ್ಟಿಯಿಂದ ಮಹತ್ತರವಾದುದು. ಶೀರ್ಷಿಕೆಯೇ ಹೇಳುವಂತೆ ತುಳುನಾಡಿಗೆ ಸ್ವಾತಂತ್ರ್ಯ ಚಳುವಳಿಯ ನೇತಾರ ಗಾಂಧಿ ಬಂದುದು ಮತ್ತು ಇಲ್ಲಿನ ಜನರು ಗಾಂಧಿಗೆ ಮತ್ತು ಅವರ ಹೋರಾಟಕ್ಕೆ ಸ್ಪಂದಿಸಿದ್ದು ಈ ಕಾದಂಬರಿಯ ಒಂದು ಮಗ್ಗುಲು. ಇಡೀ ತುಳುನಾಡಿನ ಸಂಸ್ಕೃತಿಯನ್ನು ಬೇರೆ ಬೇರೆ ಹಂತಗಳಲ್ಲಿ ಅನಾವರಣ ಮಾಡಿರುವುದು ಇನ್ನೊಂದು ಮಗ್ಗುಲು. ಇವೆಲ್ಲಕ್ಕೂ ಕಲಶವಿಟ್ಟಂತೆ ಅದ್ರಾಮ ಮತ್ತು ದ್ರೌಪದಿಯರ ಪ್ರೇಮ ವೃತ್ತಾಂತವನ್ನು ವಿವರಿಸುವುದು ಕಾದಂಬರಿಯ ವಿಶಿಷ್ಟವಾಗಿದೆ. ಹೀಗೆ ಭಿನ್ನಮತೀಯರಾದ ಅದ್ರಾಮ ಮತ್ತು ದ್ರೌಪದಿಯರ ನಡುವೆ ಪ್ರೇಮ ಅಂಕುರಿಸುವಂತೆ ಮಾಡಿ, ವಿವಾಹವಾಗುವ ರೀತಿಯಲ್ಲಿ ಕಾದಂಬರಿಯ ಬೆಳವಣಿಗೆಯು ಗಾಂಧಿಯು ಸಂಪ್ರದಾಯಬದ್ಧವಾದ ಕೆಟ್ಟ ಕಟ್ಟುಪಾಡುಗಳನ್ನು ಮತಭಿನ್ನತೆಗಳನ್ನು ತೊಡೆದುಹಾಕಲು ಕೊಟ್ಟ ಕರೆ ಎನ್ನಬಹುದು. ಹಿಂದೂ ಮುಸ್ಲಿಂರ ಐಕ್ಯಕ್ಕೂ ಇದೊಂದು ಸಂಕೇತವಾಗಿದೆ.

" . . . . . ಮರಣದ ಡೋಲು ಮಾದಿರ ಕುಣಿತ' ಎಂಬ ಭಾಗ ಕಾದಂಬರಿಯ ವಸ್ತುವಿನ ದೃಷ್ಟಿಯಿಂದ ಮಹತ್ತರವಾದ ಭಾಗವಾಗಿದೆ. ಇಲ್ಲಿಗೆ ಕಾದಂಬರಿಯ ಒಂದು ಹಂತ ಮುಗಿದಿದೆ. 'ಗಾಂಧಿ ಬಂದ' ಶೀರ್ಷಿಕೆಗೆ ಅನುಗುಣವಾಗಿ ಈಗಾಗಲೇ ತುಳುನಾಡಿಗೆ ಗಾಂಧಿ ಒಮ್ಮೆ ಬಂದು ಹೋಗಿದ್ದನ್ನು ಹಿಂದೆ ಗಮನಿಸಲಾಗಿದೆ. ಹೀಗೆ ಒಮ್ಮೆ ಬಂದು ಹೋದ ಗಾಂಧಿ ಮತ್ತೆ ತುಳುನಾಡಿಗೆ ಬರುವವರೆಗಿನ ಬದಲಾವಣೆಗಳನ್ನು ಈ ಭಾಗದಲ್ಲಿ ಕಾಣಬಹುದು.

ರೌದ್ರ ಸಂವತ್ಸರದಲ್ಲಿ ಬಂದು ಹೋದ ಗಾಂಧಿ ಮತ್ತೆ ಪ್ರಭಾವ ಸಂವತ್ಸರದಲ್ಲಿ ಬಂದರು. ಅಂದರೆ ೭ ವರ್ಷಗಳ ಅಂತರವಿತ್ತು. ಇಲ್ಲಿ ಒಂದು ಹಂತದ ಕತೆಯನ್ನು ಮುಗಿಸಿದ ಲೇಖಕಿ ಓದುಗರಿಗೆ ಉಸಿರಾಡಲು ಒಮ್ಮೆ ಅವಕಾಶವಿತ್ತು, ಮತ್ತೆ ನೇರವಾಗಿ ೭ ವರ್ಷಗಳ ನಂತರದ ತುಳುನಾಡ ಬದುಕಿಗೆ ಕೊಂಡೊಯ್ದಿದ್ದಾರೆ. ಅಂದರೆ ಈ ೭ ವರ್ಷಗಳ ಅವಧಿಯಲ್ಲಿ ಏನೂ ಮಹತ್ವದ ಘಟನೆಗಳು ನಡೆಯಲಿಲ್ಲವೆಂದಲ್ಲ. ಬಹಳಷ್ಟು ಘಟನೆಗಳು ನಡೆದದ್ದು ಈ ಅವಧಿಯಲ್ಲೆ. ಕಥೆಯ ಮುಖ್ಯ ವಸ್ತುವಾದ ಅದ್ರಾಮ ಮತ್ತು ದ್ರೌಪದಿಯರ ಪರಿಚಯ, ಸ್ನೇಹ ಆಕರ್ಷಣೆಯಾಗಿ ಪ್ರೇಮವಾಗಿ ಗಟ್ಟಿಗೊಂಡು ಧರ್ಮದ ಕಟ್ಟುಪಾಡುಗಳನ್ನು ಕಿತ್ತೊಗೆದು ವಿವಾಹ ಮಾಡಿಕೊಳ್ಳುವ ದೃಢ ನಿರ್ಧಾರಕ್ಕೆ ಬರಲು ಈ ೭ ವರ್ಷಗಳ ದೀರ್ಘ ಕಾಲದ ಅಗತ್ಯ ಇದ್ದೇ ಇತ್ತು.

ಈ ೭ ವರ್ಷಗಳ ಅವಧಿಯಲ್ಲಿ ತುಳುನಾಡಿನಲ್ಲಿ ಸಂಭವಿಸಿದ ಸಾವುಗಳೇ ಹೆಚ್ಚು. ಪ್ರತೀ ಮನೆತನದ ಹಿರಿಯ ತಲೆಗಳು ನೆಲಕ್ಕುರುಳಿದ್ದವು. ಆಳುಗಳ ಕುಟುಂಬದಲ್ಲೂ ಸಾವು ಸಂಭವಿಸಿತ್ತು. ೪ ವರ್ಷಗಳ ಹಿಂದೆ ತೆಂಕ್ಲಾಗೆ (ತೆಂಕು ದಿಕ್ಕಿನ ಕಡೆಯ ಊರಿಗೆ) ಹೋದ ನಾರಾಯಣ ಭಟ್ಟರು ಹಿಂತಿರುಗಿದಾಗ ಮಗಳಿಗೆ ಧರ್ಮ ನೀತಿ ಹೇಳುವ ಹೆಬ್ಬಾರರು ಪುಟ್ಟಮ್ಮಕ್ಕನ ಸಂಪೂರ್ಣ ಜವಾಬ್ದಾರಿಯನ್ನು ಸಂತೋಷದಿಂದಲೇ ತಮ್ಮ ಹೆಗಲಿಗೇರಿಸಿಕೊಂಡಿದ್ದರು.

ಇತ್ತ ಕುಳ್ಯಾಗುತ್ತಿನ ಪಾಂಡು ಶೆಟ್ಟರ ಸಂಸಾರದಲ್ಲಿ ನೆಮ್ಮದಿ ಕದಡಿ ಮನೆ ರಣರಂಗವಾಗಿತ್ತು. ಪೊಸೊಡಿಗುತ್ತಿನ ತೌಡ ಶೆಟ್ಟರ ಮನೆಯಲ್ಲಿ ನೆಮ್ಮದಿ ಇರಲಿಲ್ಲ. ಗುತ್ತಿನ ಹೆಂಗಸರು ತಮ್ಮ ಅಧಿಕಾರ ಕಪಿಮುಷ್ಠಿಯಲ್ಲಿ ಗಂಡಸರನ್ನು ದಾಳಗಳಂತೆ ಆಡಿಸುತ್ತಿದ್ದರು. ಸಂಬಂಧಗಳ ನಡುವೆ ಬೆಂಕಿ ಹಚ್ಚುತ್ತಿದ್ದರು. ಗುತ್ತಿನ ಕಲಹ ಹೊರಬಂದರೆ ಮನೆತನದ ಮರ್ಯಾದೆ ಹೊರಬರುವ ಕಾರಣ ಅದರ ಬೆಂಕಿ ಒಳಗೊಳಗೇ ಸುಡುತ್ತಿತ್ತು. ಇದು ಗುತ್ತಿನ ಮನೆತನಗಳ ಕತೆಯಾದರೆ, ಮಾರಪ್ಪಶೆಟ್ಟಿ ೪೦ ವರ್ಷ ದಾಟಿದರೂ ಮದುವೆಯಾಗದೆ ಖಾದಿ ಪ್ರಚಾರ ಸ್ವರಾಜ್ಯ ಎಂದು ತಿರುಗಾಡುತ್ತಾ ಕಾಲ ಕಳೆಯುತ್ತಿದ್ದನು. ಹೀಗೆ ತುಳುನಾಡಿನ ಪರಂಪರಾಗತ ಬದುಕನ್ನು ಸಾವು ಮತ್ತು ಅದಃಪತನದ ಮೂಲಕ ಸೂಚಿಸಿ, ಗಾಂಧಿಯ ಬರುವಿಕೆಗೆ ವಾತಾರವಣ ಸಿದ್ಧಗೊಳಿಸಲಾಗಿದೆ.

ಒಮ್ಮೆ ಗಾಂಧಿ ಬಂದು ಹೋದ ಪರಿಣಾಮವೆಂಬಂತೆ ಕೆಡ್ಡಸದ ಘಲಗಾಳಿಯಂತೆ ಬೀಸಿ ಬಂದ ಅಸಹಕಾರ ಚಳುವಳಿ, ಪರದೇಶಿ ವಸ್ತ್ರ ಬಹಿಷ್ಕಾರ, ಖಾದಿ ಪ್ರಚಾರ ಇನ್ನಿಲ್ಲದಂತೆ ಯಶಸ್ವಿಯಾಗಲು ಮಾರಪ್ಪ, ತಿಂಗಳರಾಯ ಕಾರ್ನಾಡರು, ಪೂಂಜರಂಥ ದೇಶ ಭಕ್ತರು ಬದುಕನ್ನು ತ್ಯಾಗ ಮಾಡಿದರು. ಆಳುಗಳೂ ಗಾಂಧಿಯನ್ನೊಮ್ಮೆ ಕಣ್ತುಂಬ ಕಂಡರೆ ಧನ್ಯರೆಂಬಂತೆ ಮೋಡಿ ಗೊಳಗಾದರು.

ಜಾರಿಗೆ ಬೆಟ್ಟಿನ ಸುಬ್ಬಯ್ಯ ಶೆಟ್ಟರ ಮಗಳು ದಾರು ೭ ವಸಂತಗಳನ್ನು ತನ್ನ ನಿಟ್ಟುಸಿರಲ್ಲೇ ಕಳೆದು ಬಳಲಿ ಬೆಂಡಾಗಿದ್ದರೆ ಸುರಗಿ ಮಠದ ದ್ರೌಪದಿಯ ಬದುಕು ಲವ–ಕುಶರಂತೆ ನಿಕೃಷ್ಟವಾಗಿತ್ತು. ಒಂದು

ಕಾಲದಲ್ಲಿ ಕಂಬಳದ ಕೋಣಗಳಾಗಿ ಮೆರೆದ ಲವ–ಕುಶರು ಈಗ ಗದ್ದೆ ಉಳುವ ಪಶುಗಳಾಗಿದ್ದರೆ, ದ್ರೌಪದಿಯ ಬದುಕು ಹಾಗೆಯೇ ಶೋಚನೀಯವಾಗಿತ್ತು. ಲವ–ಕುಶರ ರಾಜ ಮರ್ಯಾದೆಯನ್ನು ಜಯ–ವಿಜಯರು ದಕ್ಕಿಸಿಕೊಂಡಿದ್ದರು. ಈ ರೀತಿ ಈ ೭ ವರ್ಷಗಳ ಅವಧಿಯಲ್ಲಿ ಕನ್ನಡ ಜಿಲ್ಲೆಯಲ್ಲಿ ಬಹಳಷ್ಟು ಮಾರ್ಪಾಡುಗಳು ಆಗಿದ್ದವು.

ಇತ್ತ ಸಮಾಜ ಸುಧಾರಣೆಗಾಗಿ -ಕಾರ್ನಾಡರು ಮಾರಪ್ಪ ಮೊದಲಾದವರು ಪ್ರಯತ್ನಿಸುತ್ತಿದ್ದರೆ, ಅದನ್ನು ನಿರರ್ಥಕಗೊಳಿಸಲು ಇನ್ನೊಂದು ಪಂಗಡ ಸಿದ್ಧವಾಗಿತ್ತು. ಬ್ರಾಹ್ಮಣ – ಅಬ್ರಾಹ್ಮಣ ಸಹ ಪಂಕ್ತಿಭೋಜನದ ಕನಸು ನನಸಾಗಲು ಅವಕಾಶವೇ ಇಲ್ಲದಾಯಿತು. ಇಲ್ಲಿ ಜಾತಿಯು ನಾಶವಾಗಬೇಕು ಎಂದು ಪ್ರಯತ್ನಿಸಿದಷ್ಟೂ ಜಾತಿ ವ್ಯವಸ್ಥೆ ಮತ್ತಷ್ಟು ಗಟ್ಟಿಗೊಳ್ಳುತ್ತಾ ಹೋಗುತ್ತದೆ ಎಂಬ ಅರಿವಾಗುತ್ತದೆ. ಮೇಲ್ಜಾತಿಯವರು ಕೆಳ ಜಾತಿಯವರನ್ನು ನಿರಂತರವಾಗಿ ಶೋಷಿಸುತ್ತಲೇ ಬಂದಿದ್ದಾರೆ. ಅಲ್ಲದೆ ಆ ಬ್ರಾಹ್ಮಣ ಜಾತಿಗಳ ನಡುವೆಯೂ ಮೇಲು ಕೀಳು ಎಂಬ ಬೇಧವಿದೆ. ಅಂತಿಮವಾಗಿ ಎಲ್ಲಾ ಜಾತಿಗಳಿಂದಲೂ ಕೊರಗ ಜನಾಂಗದವರು ಶೋಷಿತರಾಗುವುದು ಈ ಭಾಗದಲ್ಲಿ ಗಮನಿಸಬೇಕಾದ ಅಂಶ. ಅಂದರೆ ತುಳುನಾಡಿನಲ್ಲಿ ಕೆಲವು ಪ್ರಗತಿಪರ ಚಿಂತಕರು ಹುಟ್ಟಿಕೊಂಡರೂ, ಸಂಪೂರ್ಣವಾಗಿ ಸಾಂಪ್ರದಾಯಿಕ ಮನಸ್ಸನ್ನು ತಿದ್ದಲು ಪರಿವರ್ತಿಸಲು ಅವರಿಗೆ ಸಾಧ್ಯವಾಗಲಿಲ್ಲ. ಇದರಿಂದ ಗಾಂಧಿ ತತ್ವದ ಅಗತ್ಯವನ್ನು ಕಾದಂಬರಿ ಕಂಡು ಕೊಂಡಿದೆ.

"....ಶೂದ್ರ ಜಾತಿಯವರೆಲ್ಲ ತಮ್ಮ ತಮ್ಮೊಳಗೇ ' ತಾವು ಮೇಲು . . . ತಾವು ಮೇಲು ' ಎಂದು ಕಿತ್ತಾಡುತ್ತಿರುವಾಗ, ಜಾತಿ ವ್ಯವಸ್ಥೆಯಲ್ಲಿ ಅತ್ಯಂತ ಕೆಳ ಸ್ತರದ ಐತು ಮಾತ್ರ ಅದ್ಯಾವ ಕಿರಿಕಿರಿಗೂ ತಲೆಗೊಡದೆ ತಾನುಂಡ ಸೊಗಸಾದ ಊಟವನ್ನು, ಅದು ಎಲ್ಲರೊಳಗೊಂದಾಗಿ ಪಂಕ್ತಿಯಲ್ಲಿ ಕೂತಿದ್ದನ್ನು ನೆನಪಿಸಿಕೊಳ್ಳುತ್ತಾ ' ತನ್ನೀ ಅದೃಷ್ಟಕ್ಕೆ' ಕಾರಣಕರ್ತರಾರು ಎಂಬ ಸತ್ಯ ಶೋಧನಾ ಕಾರ್ಯದಲ್ಲಿ ನಿರತನಾಗಿದ್ದ . ." ( 'ಗಾಂಧಿ ಬಂದ' ಪು. ಸಂ. ೧೮೯) ಈ ಮಾತುಗಳು ತುಳುನಾಡಿನ ಜಾತಿ ವ್ಯವಸ್ಥೆಯನ್ನು ತಿಳಿಸುತ್ತದೆ. ಅತ್ಯಂತ ಕೆಳ ವರ್ಗದ ಜನರಿಗೆ ಜಾತಿ ಮುಖ್ಯವಾಗುವುದಿಲ್ಲ. ಅವರಿಗೆ ಅವರ ಹೊಟ್ಟೆಯ ಚಿಂತೆಯೇ ಕಾಡುತ್ತದೆ. ಈ ಜಾತಿ ಕಾಡುವುದು, ಮೇಲ್ವರ್ಗದವರಿಗೆ.

ಕೃಷಿ ಪ್ರಧಾನ ಜಿಲ್ಲೆಯಾದ ತುಳುನಾಡಿನಲ್ಲಿ ಪೈರುಗಳ ಸೀಮಂತದ ಊಟ ಮಾಡುವುದು ವಾಡಿಕೆ. ಗದ್ದೆಯಲ್ಲಿ ತೆನೆ ಬಿರಿದು ಅಡ್ಡ ಮಲಗಿದ್ದ ಪೈರಿಗೆ ದೀಪದ ಆರತಿ ಎತ್ತುವ ಸಂಪ್ರದಾಯವಿದೆ. ಮೊಗವೀರರು ಕಡಲನ್ನು ಭಕ್ತಿಯಿಂದ ಪೂಜಿಸಿ ಕಡಲಾಭಿಮುಖವಾಗಿ " ತಾಯಿ ನಾವು ಬಡ ಮಕ್ಕಳು . .. ನೀನು ನಮ್ಮ ಮಹಾತಾಯಿ, ನೀನೀಗ ಸಿಟ್ಟಿನಿಂದ ಕುದಿಯುತ್ತಿರುವವಳು. . . ಶಾಂತಳಾಗಬೇಕು. ನಾವು ಸಂಕಷ್ಟದಲ್ಲಿದ್ದೇವೆ. ನಾನು ನೆನೆಸಿದಷ್ಟು ಸಂಪಾದನೆ ಒದಗಿಸಿ ಕೊಡುವ ಭಾರ ನಿನ್ನದು. ಹಾಗೆಯೇ ನಮ್ಮ ನಡವಳಿಕೆ. ಕಾರ್ಯಕ್ರಿಯೆಯಲ್ಲಿರುವ ಲೋಪದೋಷಗಳನ್ನು ನಿನ್ನ ಒಡಳೊಳಗಿಟ್ಟು

ನಮ್ಮನ್ನು ನಿನ್ನ ಮಡಿಲಲ್ಲಿಟ್ಟು ಸಲಹಬೇಕು, ಕಾಪಾಡಬೇಕು ತಾಯಿ " ಎಂದು ಪೂಜೆ ಸಲ್ಲಿಸುತ್ತಾರೆ. ತಮಗೆ ಕಾಯಕ ಒದಗಿಸಿದ , ಬದುಕನ್ನು ನೀಡಿ ಸಲಹಿದ ಕಡಲನ್ನು ದೇವರಿಗೆ ಹೋಲಿಸಿ ಪೂಜಿಸುವರು. ಇಂತಹ ಸಂಸ್ಕೃತಿಯ ಅಂಶಗಳನ್ನು ಈ ಭಾಗದಲ್ಲಿ ಲೇಖಕಿ ಕಟ್ಟಿಕೊಡುತ್ತಾರೆ. ಈ ಸಂಸ್ಕೃತಿ ನೆಲೆಯಲ್ಲೆ ಗಾಂಧಿಯನ್ನು ವಿವರಿಸುತ್ತಾರೆ.ಗಾಂಧಿಯ ಪ್ರಗತಿಪರ ಬದಲಾವಣೆಗಳು ಸಂಸ್ಕೃತಿಯ ಜಾಡಿನಲ್ಲೆ ನಡೆದಿದೆ ಎಂಬುದನ್ನು ಸಾಂಕೇತಿಕವಾಗಿ ಸೂಚಿಸುತ್ತಾ ಮುಂದೆ ಎರಡನೇ ಬಾರಿ ಗಾಂಧಿ ಬರುವ ಸುದ್ದಿ ತಿಳಿದ ಐತು ಗಾಂಧಿಯನ್ನು ಕಾಣಬೇಕೆಂಬ ಹಂಬಲದಿಂದ ಕಂಡ ಕಂಡವರ ಕಾಲು ಹಿಡಿದು ಗಾಂಧಿಯನ್ನು ನೋಡಲು ಕರೆದುಕೊಂಡು ಹೋಗಿ ಎಂದು ದುಂಬಾಲು ಬೀಳುತ್ತಾನೆ. ಐತುವಿನಂತಹ ವ್ಯಕ್ತಿಯ ಮೇಲೂ ಗಾಂಧಿ ಪ್ರಭಾವ ಬೀರಿದ್ದರು. ". . . .ಕನ್ಯಾ ತಿಂಗಳ ನಾಲ್ಕು ಹೋಗುವಂದು ಮಹಾಲಯ ಅಮವಾಸ್ಯೆ. ಕಡಲ ಸ್ನಾನ ಮಾಡುವುದು ವಾಡಿಕೆ. ಬ್ರಾಹ್ಮಣರು ಆ ದಿನ ಪಿತೃಗಳಿಗೆ ಪಿಂಡ ಪ್ರಧಾನ ಪೂಜೆ ಸಲ್ಲಿಸುತ್ತಾರೆ. ನಂತರ ನವರಾತ್ರಿಯ ಆರಂಭ ಮಂಗಳಾದೇವಿ ದೇವಸ್ಥಾನದಲ್ಲಿ ವರ್ಷದ ಹರಕೆ ಸೇವೆ ನಡೆಯುತ್ತದೆ. ತುಲಾಮಾಸದಲ್ಲಿ ತುಲಾ ಸಂಕ್ರಾಂತಿ ನಡೆಯುತ್ತದೆ. ಅದು ಕಾವೇರಿ ಸಂಕ್ರಾಂತಿಯೂ ಹೌದು. ನಾಗವೇಣಿಯವರು ತುಳುನಾಡಿನ ಸಂಸ್ಕೃತಿಯ ಅನಾವರಣ ಮಾಡುವಾಗ ಚಿಕ್ಕ ಪುಟ್ಟ ವಿವರಗಳಿಗೂ ಮಹತ್ವ ನೀಡಿದ್ದಾರೆ. ಆ ಭಾಗದ ವಿಶಿಷ್ಟವಾದ ರುಚಿಕರ ತಿಂಡಿ ಮಣ್ಣಿ ಅಥವಾ ಹಾಲು ಬಾಯಿ ಅದರ ಪರಿಮಳವೇ ಅದರ ರುಚಿಯನ್ನು ಸಾರುತ್ತದೆ. ಮಾಡುವ ವಿಧಾನವನ್ನು ವಿವರಿಸಿದ್ದಾರೆ ('ಗಾಂಧಿ ಬಂದ' ಪು. ಸಂ. ೧೯೬).

ಇನ್ನು ಈ ಭಾಗದ ಮುಖ್ಯ ಘಟ್ಟ ಸಾವಿನ ಡೋಲು ಕೇಳುವುದು. ಜಾರಿಗೆಬೆಟ್ಟಿನ ಸುಬ್ಬಯ್ಯ ಶೆಟ್ಟರ ಹೆಂಡತಿ, ಮಗಳು ದಾರುವಿನ ಶೋಚನೀಯ ಬದುಕನ್ನು ನೋಡಲಾರದೆ ಬಾವಿಗೆ ಹಾರಿ ಪ್ರಾಣ ಕಳೆದುಕೊಂಡಿದ್ದರು. ಡೋಲಿನ ಪೆಟ್ಟು ಅದನ್ನು ಊರಿಗೆ ಸಾರಿ ಹೇಳುತ್ತಿತ್ತು. ಡೋಲು ಈ ಭಾಗದ ಜನರ ಅವಿಭಾಜ್ಯ ಅಂಗ. ಸಂತೋಷದ ಕಾರ್ಯ. ದು:ಖದ ಕಾರ್ಯ. ಏನಿದ್ದರೂ ಇಡೀ ಊರಿಗೆ ತಿಳಿಯುವುದು ಈ ಡೋಲಿನ ಮೂಲಕ. ಒಂದು ಹಳ್ಳಿ ಬದುಕು ಎಷ್ಟು ಅಪ್ಯಾಯಮಾನವೆಂದರೆ ಒಂದು ಮನೆಯಲ್ಲಿ ಸಾವು ಸಂಭವಿಸಿದರೆ ಊರಿಗೇ ಊರೇ ಕಣ್ಣೀರಿಡುತ್ತ ಆ ಮನೆಗೆ ಬರುತ್ತಿದ್ದರು ಎಂಬುದಕ್ಕೆ ಈ ಘಟನೆಯೇ ಸಾಕ್ಷಿ. ಅಂತ್ಯ ಸಂಸ್ಕಾರ ಮುಗಿಯುವ ತನಕ ಎಲ್ಲರೂ ನಿಂತು ಕಾರ್ಯ ಮಾಡುತ್ತಿದ್ದರು. ತುಳುನಾಡಿನ ಅಂತ್ಯ ಸಂಸ್ಕಾರದ ಚಿತ್ರಣ ಇಲ್ಲಿದೆ.

ದಾರುವಿನ ತಾಯಿಯ ಸಾವು ಮಾರಪ್ಪನನ್ನು ಯೋಚಿಸುವಂತೆ ಮಾಡುತ್ತದೆ. ಗಾಂಧೀಜಿ, ಕಾರ್ನಾಡರ ಆದರ್ಶ ಪ್ರಭಾವ ಆತನ ಮೇಲೆ ಬೀರುತ್ತದೆ. ಕಣ್ಣೀರ ಕಡಲಲ್ಲಿ ಕೈ ತೊಳೆಯುತ್ತಿರುವ ದಾರುವಿನಂತ ದುರ್ಭಾಗಿನಿಯರಿಗೆ ಬದುಕು ಕೊಟ್ಟರೆ ಸಾವಿರ ಪುಣ್ಯಕ್ಷೇತ್ರಗಳನ್ನು ಸುತ್ತಿದ ಪುಣ್ಯ ಬರುತ್ತದೆಂದು ಕಾರ್ನಾಡರ ತಾಯಿ ಹೇಳುತ್ತಿದ್ದ ಮಾತನ್ನು ಅಕ್ಷರಶ: ನಿಜ ಮಾಡಲು ಹೊರಟನು ಮಾರಪ್ಪ ಶೆಟ್ಟಿ. ಗಾಂಧಿ ಈ ಭಾಗದ ಮನಸ್ಸುಗಳಲ್ಲಿ ತಂದ ಬದಲಾವಣೆಯು ಮಾರಪ್ಪನ ಮೂಲಕ ವ್ಯಕ್ತವಾಗಿದೆ.

ಇದೇ ಭಾಗದಲ್ಲಿ ಹೆಬ್ಬಾರರ ಧೂರ್ತ ನಡವಳಿಕೆಯು ಗಮನ ಸೆಳೆಯುತ್ತದೆ ಗುತ್ತಿನ ಮನೆಯವರು ಗಾಂಧಿ ನಿಧಿಗೆ ಅರ್ಪಿಸಿದ ಒಡವೆಗಳನ್ನು ತಮ್ಮಲ್ಲೇ ಇರಿಸಿಕೊಂಡು ಪುಟ್ಟಮ್ಮಕ್ಕನಿಗೆ ಕೊಟ್ಟು ತಮ್ಮ ವಂಚಕತೆಯನ್ನು ತೋರಿಸಿದ್ದರು. ಅಶಿಕ್ಷಿತ ಜನಾಂಗದವರೇ ಗಾಂಧೀಜಿಯವರಿಗೆ ಗೌರವ ತೋರಿಸುತ್ತಿದ್ದಾರೆ. ಶಿಕ್ಷಿತ ಜನಾಂಗದವರಾದ ಹೆಬ್ಬಾರರಂತವರಿಗೆ ಅದರ ಬಗ್ಗೆ ಕಾಳಜಿಯೇ ಇಲ್ಲ. ಗಾಂಧಿಯ ಬದಲಾವಣೆಗೆ ನಿಜವಾಗಿಯೂ ತಮ್ಮನ್ನು ಒಡ್ಡಿ ಕೊಂಡವರು ಈ ದೇಶದ ಬಡವರು, ದಲಿತರೇ ಹೊರತು ಮೇಲ್ವರ್ಗದವರಲ್ಲ ಎಂಬ ಸಂದೇಶವಿದೆ.

ಗಾಂಧಿಯವರು ಖಾದಿಯ ಬಗ್ಗೆ ಸ್ತ್ರೀಯರ ಬಗ್ಗೆ ಮಾತಾಡಿದ ಒಂದೊಂದು ಮಾತೂ ಬೆಳೆದವರಿಗೆ ವೇದ ವಾಕ್ಯವಾದರೆ, ಹೆಬ್ಬಾರರಿಗೆ ಕೋಪ ಬರಿಸಿತ್ತು. ಅವರ ರಕ್ತವನ್ನು ಕುದಿಸಲಾರಂಭಿಸಿತು. ಗಾಂಧೀಜಿಯ ಬಗೆಗಿನ ಭಿನ್ನ ದೃಷ್ಟಿಕೋನ ಇಲ್ಲಿದೆ. ಗಾಂಧಿಯವರು ಹಿಂದೂ ಮುಸ್ಲಿಮರ ನಡುವೆ ಮಧುರಬಾಂಧವ್ಯ ಏರ್ಪಡಬೇಕು ಎಂದಾಗ, ಹೆಬ್ಬಾರರು "ಈತ ಹೀಗೆ ಒದರುತ್ತಾ ಹೋದರೆ ಈ ಬ್ಯಾರಿಗಳು ಹಿಂದುಗಳ ಮನೆ ನುಗ್ಗಿಯೇ 'ಸುಮಧುರ ಬಾಂಧವ್ಯ' ಮಾಡೇ ತೋರಿಸುತ್ತಾರೆ" ಎಂದು ಉದ್ಗರಿಸಿದ್ದ ಮಾತುಗಳು ಮುಂದಿನ ಘಟನೆಗೆ ಸೂಚ್ಯವೆನ್ನಬಹುದು. ಹಿಂದೂ – ಮುಸ್ಲಿಂ ಬಾಂಧವ್ಯದ ಕನಸು ಈ ದೇಶದ ಸಾಮಾನ್ಯನ ಕನಸಾದರೆ ಈ ದೇಶದ ಮೇಲ್ವರ್ಗಕ್ಕೆ ಅದು ಒಪ್ಪಲಾರದ ತತ್ವ. ಇದೇ ಗಾಂಧೀಜಿಗೆ ಕುತ್ತಾಯಿತು ಎಂಬುದನ್ನು ಅರಿತುಕೊಳ್ಳಲು ಈ ಸನ್ನಿವೇಶ ಸಹಕಾರಿಯಾಗಿದೆ. ಗಾಂಧೀಜಿಯು ದರಿದ್ರ ನಾರಾಯಣನಿಗೆ ಒಡವೆ ಕೊಡಬೇಕೆಂದು ಅನಿಸಿದಲ್ಲಿ ಕೊಡಬಹುದು ಎಂದಾಗ ಹೆಬ್ಬಾರರು ತಮ್ಮ ಬಳಗದೊಂದಿಗೆ ಹಿಂದೆ ಬಂದರು. ಇದು ಅವರ ವ್ಯಕ್ತಿತ್ವದ ಇನ್ನೊಂದು ಮುಖವನ್ನು ತೋರಿಸುತ್ತದೆ.

ತುಳುನಾಡಿನ ಪ್ರಸಿದ್ಧ ಕುಣಿತ ಮಾದಿರ ಕುಣಿತ. ಕಾರ್ಕಳದ ನಲಿಕೆ ಜನಾಂಗದವರ ಮಾದಿರ ಪಡೆ ಗುತ್ತಿನ ಅಂಗಳದಲ್ಲಿ ಕುಣಿಯಲು ಆರಂಭಿಸಿದರು. ಕುಣಿತದ ತಂಡದಲ್ಲಿ ಹೆಂಗಸರೊಂದಿಗೆ ಹೆಣ್ಣಿನ ವೇಷದ ಪುರುಷನಿದ್ದ. ತೆಂಬರೆ ಬಾರಿಸುವವನೂ ಪುರುಷನೇ ಆಗಿದ್ದ.' ಮಾದಿರ' ಎಂದರೆ ಚುರುಕು ಸ್ವಭಾವದ, ಚೆಂದಾ ಬುದ್ಧಿವಂತ ಹೆಣ್ಣು ಎಂದರ್ಥ. ಈ ರೀತಿ ಮಾದಿರ ಕುಣಿತದ ನಂತರ ವರ್ಷಂಪ್ರತಿ ಕೊಡುವ ಕೋಲದ ಜತೆ ಈ ವಿಷ್ಣುಮೂರ್ತಿ ದೈವಕ್ಕೆ ಒತ್ತೆ ಕೋಲ, ಕೆಂಡ ಸೇವೆ ನಡೆದವು. ಮಾದಿರ ಕುಣಿತದಲ್ಲಿ ತೆಂಬರೆ ಬಡಿವವ ವ್ಯಂಗ್ಯೋಕ್ತಿ, ನೀತಿ ಪದ, ಹಾಸ್ಯದ ಹಾಡುಗಳನ್ನು ಹೇಳುತ್ತಿದ್ದರೆ, ಮಾದಿರ ವೇಷದಾರಿ ಹೆಂಗಸರು ಆ ಹಾಡನ್ನು ಪುನರುಚ್ಚರಿಸುತ್ತಾ ಸುತ್ತುಗಟ್ಟಿ ಕುಣಿಯುತ್ತಾರೆ. ಭತ್ತಗೇರುವ ಆಟದಲ್ಲಿ ಚಮಾತ್ಕಾರದಿಂದ ಗುತ್ತಿನ ಮನೆಯವರ ಮನಸು ಗೆದ್ದರು. ಹೀಗೆ ಸಾಂಸ್ಕೃತಿಕ ವಿವರಗಳ ಮಧ್ಯೆ ಗಾಂಧಿಯ ಬರುವಿಕೆಯ ಘಟನಾವಳಿಗಳು ನಡೆಯುತ್ತವೆ.

ಈ ಭಾಗದ ಕೊನೆಯಲ್ಲಿ ಅದ್ರಾಮ ಮತ್ತು ಮಾರಪ್ಪ ಮನೆಗೆ ಬಂದಾಗ ಸೂರಕ್ಕೆ " ಏನು ಈ ಸಲ ಗಾಂಧಿಗೆ ಯಾರ್ಯಾರ ನಗಗಳನ್ನು ಕೊಟ್ಟು ಬಂದಿರೋ 'ಎಂದು ಬಯ್ದಾಗ ಮಾರಪ್ಪ ಅದ್ರಾಮನನ್ನು ಮನೆಗೆ ಕಳಿಸುವ ಮೂಲಕ ಬೀಸುವ ದೊಣ್ಣೆಯಿಂದ ತಪ್ಪಿಸಿಕೊಳ್ಳುತ್ತಾನೆ. ಹಾಗೆ ಹೋದ ಅದ್ರಾಮ ಮತ್ತೆ ಮರಳಿದ್ದು ಜಾರಿಗೆಬೆಟ್ಟಿನ ಸುಬ್ಬಯ್ಯ ಶೆಟ್ಟರ ಮಡದಿಯ ಉತ್ತರಕ್ರಿಯೆಯ ದಿನ ಎಂಬಲ್ಲಗೆ ಈ ಭಾಗ ಮುಗಿಯುತ್ತದೆ. ಇಲ್ಲಿ ಗಾಂಧಿಯ ಕುರಿತಾಗಿ ಕೆಲವರಲ್ಲಿದ್ದ ಅಸಹನೆಯೂ ವ್ಯಕ್ತವಾಗಿದೆ. ಹೀಗೆ ಗಾಂದಿಯು ಒಬ್ಬ ವ್ಯಕ್ತಿಯಾಗದೆ ಮೌಲ್ಯದ ಸಂಕೇತವಾಗಿ ಕಾದಂಬರಿಯಲ್ಲಿ ಚಿತ್ರಿತರಾಗಿದ್ದಾರೆ.

# ಅಧ್ಯಾಯ – ಐದು

# ಕಾದಂಬರಿಯಲ್ಲಿ ಅಭಿವ್ಯಕ್ತಗೊಂಡ ತುಳುನಾಡ ಸಂಸ್ಕೃತಿ ಮತ್ತು ಸ್ವಾತಂತ್ರ್ಯ ಹೋರಾಟ

ತುಳುನಾಡಿಗೆ ಒಂದು ನಿರ್ದಿಷ್ಟ ಪ್ರಾದೇಶಿಕ ಸಂಸ್ಕೃತಿಯಿದೆ. ಅದು ಜನರ ಬದುಕಿನ ಕ್ರಮವನ್ನು ಪ್ರತಿಬಿಂಬಿಸುತ್ತಾ ಚಲನಶೀಲವಾಗಿದೆ. ಪ್ರಾದೇಶಿಕ ಸಾಹಿತ್ಯದ ಬೇರುಗಳನ್ನು ತನ್ನ ಒಡಲಲ್ಲಿ ಇಟ್ಟುಕೊಂಡು ಒಂದು ಸೂಕ್ಷ್ಮವಾದ ಮನುಷ್ಯ ಜಗತ್ತಿನ ಒಳ ವ್ಯಾಪಾರಗಳನ್ನು ಇಲ್ಲಿನ ಸಂಸ್ಕೃತಿ ಅಭಿವ್ಯಕ್ತಗೊಳಿಸಿದೆ.

ತುಳುನಾಡಿನ ಸಂಸ್ಕೃತಿಯನ್ನು ಮುಖ್ಯವಾಗಿ ಕಾದಂಬರಿಯ ನೆಲೆಯಿಂದ ಗ್ರಹಿಸಬಹುದು. ಕಂಬಳ, ವಿವಿಧ ಕ್ರೀಡೆಗಳು, ಹುಟ್ಟು–ಮದುವೆ–ಸಾವುಗಳು, ಕೋಲಗಳು, ವಿವಿಧ ಆಚರಣೆಗಳು, ಧರ್ಮಗಳು ಇಲ್ಲಿ ಆಚರಿಸಲ್ಪಡುತ್ತದೆ. ಕಾಂದಬರಿಯ ಮೂಲಕ ಇವುಗಳ ಮೂಲ ನೆಲೆಯನ್ನು ಗ್ರಹಿಸಲು ಸಾಧ್ಯವಾಗಿದೆ. ಸಾಂಸ್ಕೃತಿಕ ಆಚರಣೆಗಳ ಅಧ್ಯಯನದೊಂದಿಗೆ ಪ್ರಕೃತಿ ಸಂಬಂಧಿಯಾದ ವಸ್ತುಗಳನ್ನು ಪೂಜೆಗೆ ಅರ್ಹವಾಗುತ್ತವೆ. ಪಂಚಭೂತಗಳಾದ ನೀರು, ವಾಯು, ಅಗ್ನಿ, ಭೂಮಿ, ಆಕಾಶಗಳು ಆರಾಧನೆಗೆ ಒಳಗಾಗಿವೆ. ಇದನ್ನು ಕಾದಂಬರಿ ಮನುಷ್ಯನ ವಿವರಗಳೊಂದಿಗೆ ಬದುಕಿನ ಜೊತೆಜೊತೆಗೆ ಬಿಚ್ಚಿಡುತ್ತಾ ಹೋಗುತ್ತದೆ.

ಕಂಬಳವು ತುಳುನಾಡಿನ ವಿಶೇಷ ಆಚರಣೆ ಹಾಗೂ ಕ್ರೀಡೆ. ಮನುಷ್ಯ ಜಗತ್ತು ಪ್ರಾಣಿಗಳ ಜಗತ್ತಿನೊಂದಿಗೆ ಮೂಕವಾಗಿ ಸ್ಪಂದಿಸುತ್ತದೆ. ಇಲ್ಲಿ ಶತಮಾನಗಳಿಂದ ಭೂಮಿಯ ಸ್ವಂತ ಒಡೆತನ ಪಡೆಯಲಾಗದ ಕೊರಗರು ಕೋಣಗಳ ಒಡನಾಡಿಯಾಗಿ ಈ ಆಚರಣೆಯಲ್ಲಿ ಒಳಗೊಂಡಿದ್ದಾರೆ. ಇದು ಊರಿನ ಒಡೆಯರಾದ ಹೆಬ್ಬಾರರ ಕಟ್ಟಪ್ಪಣೆಯೂ ಹೌದು. ಅನಾದಿ ಕಾಲದಿಂದ ನಡೆಸಿಕೊಂಡು ಬಂದ ಸಂಪ್ರದಾಯದ ಜೊತೆಗೆ ಶೂದ್ರರ ಬದುಕು ವಿವಿಧ ನೆಲೆಯಲ್ಲಿ ಅನಾವರಣಗೊಳ್ಳುತ್ತಾ ಹೋಗುತ್ತದೆ. ಚಂದ್ರಕೆರೆ ಕಂಬಳದ ವಿವರವು ಕಾದಂಬರಿಯ ಪ್ರಮುಖ ಭಾಗವಾಗಿ ಪ್ರಾರಂಭದಲ್ಲಿ ಕಾಣಿಸಿಕೊಂಡಿದೆ. "...... ಕಂಬಳದ ಸಂಭ್ರಮ ಹೆಬ್ಬಾರರ ಅಂಕಣದ ಮನೆಯೊಳಗೆ, ಹುರಿದ ಒಣಮೀನ ವಾಸನೆಯಂತೆ ನಿಧಾನಕ್ಕೆ ಹರಡುತ್ತಿದ್ದರೆ, ಹೊರಗಡೆ ಅಂಗಳದಲ್ಲಿ, ಕೊಟ್ಟಿಗೆಯಲ್ಲಿ, ಕಂಬಳದ ಹುಣಿಯಲ್ಲಿ–ಕೆರೆಯಲ್ಲಿ, ಇಡಿಯ ಬಾಕಿ ಮಾರುಗದ್ದೆಯಲ್ಲಿ, ಅದರಾಚೆಗಿನ ಬೆಟ್ಟುಗದ್ದೆಗಳ ಓರೆಕೋರೆಯಲ್ಲಿರುವ ಗೇಣಿ ಒಕ್ಕಲ ಗುಡಿಸಲುಗಳಲ್ಲಿ, ಅಷ್ಟೇಕೆ ಇಡಿಯ ಊರಲ್ಲೇ ಕಂಬಳದ ಸಡಗರ ಕಟ್ಟ ಹುಣಿಯ (ಬದು) ಮೇಲಿನ ಪಾಲೆಮರದ ಹೂಗಳ ಕಮಟುವಾಸನೆಯಂತೆ ಕ್ಷಣಕ್ಷಣವೂ ದಟ್ಟವಾಗಿ ಅಡರ ತೊಡಗಿತು ....." (ಗಾಂಧಿ ಬಂದ, ಪು. ಸಂ. ೧) ಕಾಂದಬರಿ ಕಂಬಳದ ವಿವರಗಳೊಂದಿಗೆ ಆರಂಭವಾಗುತ್ತದೆ.

ಇಲ್ಲಿ ಎರಡು ಸಾಮಾಜಿಕ ವ್ಯವಸ್ಥೆಗಳ ಪರಿಚಯವಾಗುತ್ತದೆ. ಜಾತಿ, ಆರ್ಥಿಕ ನೆಲೆಯಲ್ಲಿ ಅತೀ ಮೇಲ್‌ಸ್ತರದಲ್ಲಿರುವ ಬ್ರಾಹ್ಮಣರಿದ್ದಾರೆ. ಹಾಗೇ ಅತೀ ಕೆಳಸ್ತರದಲ್ಲಿರುವ ಅಸ್ಪೃಶ್ಯರಿದ್ದಾರೆ. ಇವರ ಮಧ್ಯೆ ಒಂದು ಸಾಂಸ್ಕೃತಿಕ ಲೋಕ ಬಿಚ್ಚಿಕೊಳ್ಳುತ್ತಾ ಹೋಗುತ್ತದೆ. ಈ ಮೂಲಕ ಇವರ ಬದುಕಿನ ಒಳಗೆ ಇರುವ, ಸಾಮರಸ್ಯವು ವ್ಯಕ್ತವಾಗುತ್ತದೆ. ಕಾದಂಬರಿಯಲ್ಲಿ ಸಾಂಸ್ಕೃತಿಕ ನಿರೂಪಣೆಯ ನೆಲೆಯಲ್ಲಿಯೇ ಮನುಷ್ಯ ಸ್ವಭಾವಗಳ ಪರಿಚಯವಾಗುತ್ತದೆ.

ಕಂಬಳದ ಆಚರಣೆಯೊಟ್ಟಿಗೆ ವರ್ಣ ವ್ಯವಸ್ಥೆಯನ್ನು ಪರಿಚಯಿಸುವ ಭೋಜನದ ಒಂದು ಸಂದರ್ಭವೂ ಇಲ್ಲಿದೆ. ಬ್ರಾಹ್ಮಣರ ಮನೆಯಲ್ಲಿ ಮೂಡೆ ತಿಂಡಿಯನ್ನು ತಯಾರಿಸುತ್ತಾರೆ. ಮುಂಡೇವು ಗಿಡಗಳ ಎಲೆಗರಿ ಕತ್ತರಿಸಿ ತಂದು, ಚಂದ್ರಿಕೆಯಾಕಾರದಿ ಸುತ್ತಿಟ್ಟು, ಕಡೆದ ಅಕ್ಕಿ ಹಿಟ್ಟನ್ನು ಸುರಿಯುತ್ತಾರೆ. ತರಕಾರಿ ಪಲ್ಯ ಸಾರುಗಳನ್ನು ಮಾಡಲಾಗುತ್ತದೆ. ಶೂದ್ರರ ಮನೆಯಲ್ಲಿ ಮಾಂಸಾಹಾರ ತಯಾರಿಸುತ್ತಾರೆ. ಪ್ರತಿಯೊಂದು ವಸ್ತು ವಿಷಯಗಳು ಒಂದು ಜೀವನ ಸಂಸ್ಕೃತಿಯನ್ನು ಪರಿಚಯಿಸುತ್ತದೆ. ಪ್ರಕೃತಿಯ ಅನೇಕ ಮನುಷ್ಯ ಒಂದು ಸಂಬಂಧವನ್ನು ಅವಿನಾಭಾವವಾಗಿ ಕಾಪಾಡಿಕೊಂಡು ಬಂದಿದ್ದಾನೆ. ಇದು ಕಾದಂಬರಿಯ ಕಂಬಳದ ಹಿನ್ನೆಲೆಯಲ್ಲಿ ಹೀಗೆ ವ್ಯಕ್ತವಾಗಿದೆ.

ಕಂಬಳದಂಥ ಸಾಂಸ್ಕೃತಿಕ ಆಚರಣೆಯಣೆಯಲ್ಲಿ ಎಷ್ಟೇ ಶೋಷಣೆಯ ವಿಚಾರಗಳಿದ್ದರೂ, ಇಂಥ ಆಚರಣೆಗಳು ಒಂದು ಊರಿನ ಸಂಬಂಧಗಳನ್ನು ಕಾಪಾಡುತ್ತದೆ. ಭಿನ್ನ ರೀತಿಯ ಜಾತಿ–ಜನರು ಸೇರುತ್ತಾರೆ. ಒಟ್ಟಿಗೆ ಭಾಗವಹಿಸುತ್ತಾರೆ. ಸಂಭ್ರಮಿಸುತ್ತಾರೆ. ಶೂದ್ರರು ಕೆಲಸದ ದಿನಕ್ಕೆ ಇದೊಂದು ಬಿಡುವಿನ ದಿನವೆಂದು ಖುಷಿಯನ್ನು ಪ್ರತಿಕ್ರಯಿಸುತ್ತಾರೆ. ಇದು ಕೇವಲ ಕೋಣ ಓಡಿಸುವ ಸ್ಪರ್ಧೆಯಲ್ಲ. ಕಂಬಳದ ಸಂಭ್ರಮದಲ್ಲಿ ಕೊರಗರ ಪಾತ್ರ ಶ್ರೇಣಿಕೃತ ವ್ಯವಸ್ಥೆಯ ವಿಶ್ವರೂಪದ ಪರಿಚಯ ಮಾಡಿಕೊಡುತ್ತದೆ. ಜನಪದರ ಬದುಕಿನಲ್ಲಿ ದುಡಿಮೆಗೆ ಪ್ರಾಮುಖ್ಯತೆ ನೀಡುತ್ತಾರೆ. ಈ ಕ್ರೀಡೆಯ ಜೊತೆಗೆ ಗದ್ದೆಯಲ್ಲಿ ನೇಜಿ ನೆಡುವ ಕೆಲಸವೂ ನಡೆದುಹೋಗುತ್ತದೆ. ಮನೋರಂಜನೆಯ ಹಿನ್ನಲೆಯಲ್ಲಿ ಬುದ್ಧಿವಂತಿಕೆಯನ್ನು ಉಪಯೋಗಿಸಿ ಶೂದ್ರರನ್ನು ಆಳುವ ವರ್ಗ ಇಲ್ಲಿ ಬಳಸಿಕೊಳ್ಳುವುದು ತಿಳಿಯುತ್ತದೆ. ಕಂಬಳದ ಕೋಣಗಳು ವಯಸ್ಸಾದಾಗ ಅದರ ಸ್ಥಾನವನ್ನು ಬೇರೆ ಕೋಣಗಳು ಆಕ್ರಮಿಸುತ್ತವೆ. ಕೋಣಗಳನ್ನು ನೋಡಿಕೊಳ್ಳಲು ಬಡವರ ಜೀವನ ಮೀಸಲಾಗುತ್ತಿತ್ತು. ಮೂಢನಂಬಿಕೆಗಳನ್ನು ಹೇರಿ ಮೇಲ್ವರ್ಗದವರು ಇವರನ್ನು ನಿಯಂತ್ರಿಸುವುದು ಕಂಬಳದಂತಹ ಆಚರಣೆಗಳ ಹಿನ್ನಲೆಯಲ್ಲಿ ವ್ಯಕ್ತವಾಗುವುದು .

“..... ಕೆಟ್ಟ ದಿಟ್ಟಿಗಳೆಲ್ಲ ಸತ್ತುಹೋಗಲಿ......” (ಗಾಂಧಿ ಬಂದ, ಪು. ಸಂ. ೧೧) ಕೂಸ ಮ್ಯೊಲಿ ಕಬ್ಬಿಣದ ನೀರನ್ನು ಕೋಣಗಳಿಗೆ ಕುಡಿಸುತ್ತಾನೆ. ಇಲ್ಲೆಲ್ಲ ಬಲವಾದ ಮೂಢನಂಬಿಕೆಗಳು ಕೆಲಸ ಮಾಡುತ್ತವೆ. ಕಂಬಳದಲ್ಲಿ ವಯಸ್ಸಾದ ಕೋಣಗಳನ್ನು ಹಣಕ್ಕೆ ಮಾರಾಟ ಮಾಡುತ್ತಾರೆ. ಆದರೆ ಅತಿ ಲಾಭವಿಲ್ಲದ ಈ ವ್ಯಾಪಾರ ಅಂತಸ್ತು, ಸ್ಥಾನಮಾನಕ್ಕೆ ಸಂಬಂಧಪಟ್ಟದ್ದು. ಕೋಣಗಳನ್ನು ಕೊಂಡುಕೊಳ್ಳುವುದು ಹಣವಂತರಿಂದ ಮಾತ್ರ ಸಾಧ್ಯ. ಹೀಗೆ ಬದುಕಿನ ಆರ್ಥಿಕ ಚಿಂತನೆಗಳು ಇಲ್ಲಿ ಹೀಗೆಯೇ ವಿಸ್ತಾರಗೊಳ್ಳುತ್ತಾ ಹೋಗುತ್ತದೆ.

ಕಾದಂಬರಿಯೊಳಗೆ ಎರಡು ಜೀವನ ವಿಭಿನ್ನ ಸಂಸ್ಕೃತಿಗಳ ಪರಿಚಯವಾಗುತ್ತದೆ. ಮುಂಜಾನೆಯಿಂದ ಹಿಡಿದು ಸಾಯಂಕಾಲದ ತನಕ ಶೂದ್ರರು ಮತ್ತು ಬ್ರಾಹ್ಮಣರ ಮಧ್ಯೆ ಸಂಘರ್ಷ ಮತ್ತು ಸಾಮರಸ್ಯಗಳು ಘಟಿಸುತ್ತಲೆ ಇರುತ್ತದೆ. ದ್ವೇಷಕ್ಕೆ ಪ್ರತಿದ್ವೇಷವಾಗಿ ವರ್ತಿಸುತ್ತಾರೆ. ಇದನ್ನು 'ಕಾಳ್ಗಿಚ್ಚುಗಳ ಕಾಳಗ' ಅಧ್ಯಯದಲ್ಲಿ ಗುರುತಿಸಲಾಗಿದೆ. ಕೋಳಿ ಅಂಕದ ನಂಬಿಕೆಗಳಲ್ಲಿ ಇದು ವ್ಯಕ್ತವಾಗಿದೆ. ಒಡೆಯನಿಂದ ದಿನ ಬೆಳಗಾದರೆ ಬೈಗುಳಗಳನ್ನು ಪಡೆದುಕೊಳ್ಳುವ ಒಡೆಯನನ್ನು ವಿರೋಧಿಸುವ ತಂತ್ರದೊಂದಿಗೆ ಜೀವನದಲ್ಲಿ ಸಂಘರ್ಷ ಸಾಮರಸ್ಯ ಇವರಲ್ಲಿ ಏರ್ಪಡುತ್ತಲೇ ಇದೆ. ಇದನ್ನು ಸಂಸ್ಕೃತಿಯ ನೆಲೆಯಲ್ಲಿ ಗ್ರಹಿಸಲಾಗಿದೆ. "................. ಈ ದರಿದ್ರ ಹಸಿರು ಹಾವು ಬೇಡ.................... ಕೇರೆಹಾವು ಬೇಡ........................ ಎಲ್ಲದಕ್ಕೂ ಮಾರಿ ಹೊಡಿಲಿ, ಈ ಬ್ರಾಂಮಣ ಯಾಕೆ ಫೀಳಿಟ್ಟ ಎಂಬ ಯೋಚನೆಯೇ ತಲೆ ತುಂಬ ಅಡರತೊಡಗಿತು...." (ಗಾಂಧಿ ಬಂದ, ಪು. ಸಂ. ೪೪) ಹೀಗೆ ಕೂಸ ಮ್ಯೊಲಿ ಒಡೆಯನನ್ನು ಜಯಿಸುವ ಉಪಾಯ ಇಲ್ಲಿದೆ.

ಕೋಳಿ ಕಟ್ಟದ ಒಟ್ಟೆ ಬಂಟೆಯು ಸಂಸ್ಕೃತಿಯ ಹೊರಗಿನವರಿಗೆ ಮೂಢನಂಬಿಕೆಯಾದರೆ, ಅದರ ಆಚರಣೆಯಲ್ಲಿ ಭಾಗಿಯಾಗುವವರಿಗೆ ನಂಬಿಕೆಗಳ ಪ್ರಶ್ನೆಯಾಗುತ್ತದೆ. ಕೋಳಿಕಟ್ಟವು ಸಾಂಸ್ಕೃತಿಕ ಸಂದರ್ಭಗಳನ್ನು ಕಟ್ಟಿಕೊಡುವ ಕೋಲಗಳ ಸ್ಥಳದಲ್ಲಿಯೇ ನಡೆಯುತ್ತದೆ. ಇದು ಕಾದಂಬರಿಯು ಹಿಡಿದಿಟ್ಟ ಜೀವನ ಸಂಸ್ಕೃತಿಯ ಪರಿಚಯಿಸುತ್ತದೆ.

ತುಳುನಾಡಿನ ಕೆಡ್ಡಸದ ಆಚರಣೆಯು ತುಳುನಾಡ ಪ್ರಾದೇಶಿಕ ನಂಬಿಕೆಗಳ ಮಾಹಿತಿ ನೀಡುತ್ತದೆ. ಇಲ್ಲಿ ಭೂಮಿಯನ್ನು ಹೆಣ್ಣಿಗೆ ಗುರುತಿಸಿಕೊಂಡಿದ್ದಾರೆ. ಇಲ್ಲಿ ಭೂಮಿ, ತಾಯಿ, ಕಡಲು ಇವೆಲ್ಲಾ ಮಾತೃಸ್ಥಾನದ ನೆಲೆಯಲ್ಲಿ ಗ್ರಹಿತವಾಗಿದೆ. ಜೊತೆಗೆ ತುಳುನಾಡ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯ ಪರಿಚಯವೂ ಆಗುತ್ತದೆ. ತುಳುನಾಡಿನಲ್ಲಿ 'ಕೆಡ್ಡಸವು' ಭೂಮಿತಾಯಿಯನ್ನು ಸಂಭ್ರಮದಿಂದ ಪೂಜೆ ಮಾಡಿ ಬರಮಾಡಿಕೊಳ್ಳುವ ಸಂಭ್ರಮದ ಹಬ್ಬ. ಭೂಮಿತಾಯಿಗೆ ಎಣ್ಣೆಯನ್ನು ಮುತ್ತೈದೆಯರು ಎರೆಯುತ್ತಾರೆ. ಧಾನ್ಯಗಳನ್ನು ಪುಡಿಮಾಡಿ ಪ್ರಸಾದದ ರೂಪದಲ್ಲಿ ಸಮರ್ಪಿಸುತ್ತಾರೆ.

".... ಭೂತಾಯಿ ಮುಟ್ಟಾಗಿದ್ದಾಳೆ. ನಿನ್ನ ಮಕರ ಮಾಸದ ಇಪ್ಪತ್ತೇಳನೇ ದಿನ ಮೊದಲ ನೀರು, ಅದು ಶುರು ಖೆಡ್ಡಸ ಅಥವಾ ಕೊಡಿಖೆಡ್ಡಸ. ಇಂದು ಇಪ್ಪತ್ತೆಂಟನೆಯ ದಿನ, ಎರಡನೇ ನೀರು, ಇದು ನಡುಖೆಡ್ಡಸ, ನಾಳೆ ಇಪ್ಪತ್ತೊಂಭತ್ತನೇ ದಿನ, ಮೂರನೇ ನೀರು. ಅದು ಕಡೆಖೆಡ್ಡಸ. ನಾಡಿದ್ದು ನಾಲ್ಕನೇ ದಿನ, ಕುಂಭ ಸಂಕ್ರಮಣ. ಅಂದು ರಜಸ್ವಲೆಯಾದ ಭೂತಾಯಿಯು ಮಿಂದು ಶುಚಿಯಾಗಿ ಬರುವ ದಿನ....." (ಗಾಂಧಿ ಬಂದ, ಪು. ಸಂ. ೯೫). ಹೆಣ್ಣು ಮತ್ತು ಭೂಮಿಯ ಬಗ್ಗೆ ಜನಪದರಿಗೆ ಇರುವ ನಂಬಿಕೆ ಇಲ್ಲಿ ವ್ಯಕ್ತವಾಗುತ್ತದೆ. ಮಾತೃಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣು, ಭೂಮಿ ಎಲ್ಲವೂ ಮೌಲ್ಯವುಳ್ಳದ್ದು. ಈ ಸಂಸ್ಕೃತಿಯ ಪರಿಚಯ ಉಂಟಾಗುತ್ತದೆ.

"………… ಶಿಶಿರನ ಆಗಮನಕ್ಕೆ ಚಳಿಗಾಲದಲ್ಲಿ ಎಲೆ ಉದುರಿಸಿಕೊಂಡ ಗಿಡ ಮರಗಳು, ಕೆಂಬಣ್ಣದ, ಹೊಂಬಣ್ಣದ, ಹಸಿರು ಚಿಗುರೆಲೆಗಳಿಂದ ಕಂಗೊಳಿಸುತ್ತಿದ್ದರೆ ನೋಡುಗರ ಕಣ್ಣಿಗೆ ಭೂತಾಯಿ ರಜಸ್ವಲೆಯಾಗಿದ್ದಾಳೆ ಎಂದು ಅನಿಸುವಂತಿದೆ...." (ಗಾಂಧಿ ಬಂದ, ಪು. ಸಂ. ೯೫). ಭೂಮಿ ತುಳುನಾಡ ಸಂಸ್ಕೃತಿಯಲ್ಲಿ ಫಲವತ್ತತೆಯ ಸಂಕೇತವಾಗಿ ಬಂದಿದೆ. ಇದರಿಂದ ಹೆಣ್ಣನ್ನು ಭೂಮಿಗೆ ಹೋಲಿಸಲಾಗುತ್ತದೆ. ಪ್ರಕೃತಿಯ ವೈವಿಧ್ಯ ಸಸ್ಯರಾಶಿಗಳಲ್ಲಿ ಮಣ್ಣಿನಲ್ಲಿ ಹೊಸತಾದ ಒಂದು ಸೃಷ್ಟಿಯನ್ನು ಗುರುತಿಸಲಾಗುತ್ತದೆ. ಆದು ಹುಟ್ಟಿನ ನೆಲೆಯಲ್ಲಿ ಭೂಮಿ ಎಲ್ಲವನ್ನು ತುಂಬಾ ಸೂಕ್ಷ್ಮವಾಗಿ ನಿಭಾಯಿಸುವ ಸ್ಥಿತಿಯಲ್ಲಿ ಪೂಜನೀಯವಾಗಿ ಗುರುತಿಸಲ್ಪಡುತ್ತದೆ. ತುಳುನಾಡಿನ ಜನರು ತಾಯಿಯಾಗಿ ಭೂಮಿಯನ್ನು ಕಲ್ಪಿಸಿರುವ ಸಂದರ್ಭ ಕಾದಂಬರಿಯಲ್ಲಿ ಮೂಡಿಬಂದಿದೆ.

'ತೆಂಬರೆ ಕುಣಿತವು' ಇನ್ನೊಂದು ತುಳುನಾಡ ಆಚರಣೆಯಾಗಿದೆ. ಇಲ್ಲಿ 'ಮಾಯಿದ ಪುರುಷ' ಹಾಡಿನ ಮೂಲಕ ಕುಣಿತವನ್ನು ಪ್ರಾರಂಭಿಸುತ್ತಾರೆ. ". . . . . . . . ಸೋದರರು ದಂಡಿನಿಂದ ಬಂದು ತಂಗಿಯನ್ನು ಕಾಣದೆ ದುಃಖಿತರಾಗುತ್ತಾರೆ. ಹೆಂಡಂದಿರನ್ನು ವಿಚಾರಿಸಿದರೆ 'ಉಮ್ಮ ಗೊತ್ತಿಲ್ಲ' ಎನ್ನುತ್ತಾರೆ. ಏಳು ಸೋದರರು ಏಳು ದಿಕ್ಕಿಗೆ ತೆರಳಿ ತಂಗಿಗಾಗಿ ಶೋಕಿಸುತ್ತಾ ಹುಡುಕುತ್ತಿರುವಾಗ ಒಬ್ಬ ಸೋದರನಿಗೆ ಆಕೆ ಆ ಅಜ್ಜ ಮನೆಯಲ್ಲಿ ಕಾಣ ಸಿಗುತ್ತಾಳೆ. ತಂಗಿ ಮತ್ತು ಅಜ್ಜಿಯಿಂದ ಸತ್ಯ ಸಂಗತಿ ತಿಳಿದುಕೊಂಡ ಅಣ್ಣಂದಿರು ತಂಗಿಗೆ ಈ ಪರಿಯಲ್ಲಿ ಹಿಂಸೆ ನೀಡಿದ ಪತ್ನಿಯರನ್ನು ಮನೆ ಸಮೇತ ಜೀವಂತ ಸುಟ್ಟು ಭಸ್ಮ ಮಾಡುತ್ತಾರೆ. ತಾವು ಕದಿರೆಗೆ ಹೋಗಿ ತಂಗಿಯ ಜೊತೆಯಲ್ಲಿ ಮಾಯವಾಗುತ್ತಾರೆ. . . . . . . "(ಗಾಂಧಿ ಬಂದ ಪು. ಸಂ. ೧೨೭). ಮಾತೃ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣು ಮಗಳು ಹೊಂದಬಹುದಾದ ಅಧಿಕಾರ, ಪ್ರೀತಿ ಮಾನವ ಸಂಬಂಧಗಳು ಇಲ್ಲಿ ವ್ಯಕ್ತವಾಗಿವೆ. ತಂಗಿಗೋಸ್ಕರ ಏನೂ ಮಾಡಬಹುದಾದ ಅಣ್ಣಂದಿರ ಸಾಹಸದ ಸಮಾಜ ಚಿತ್ರಣವನ್ನು ಕಥೆ ಕಟ್ಟಿಕೊಡುತ್ತದೆ.

ಕಂಗೀಲು ಕುಣಿತವು ದಕ್ಷಿಣ ಕನ್ನಡ ಜಿಲ್ಲೆಯ ಕರಾವಳಿ ಭಾಗದಲ್ಲಿ ಕಾಣಸಿಗುವ ಸಾಂಸ್ಕೃತಿಕ ಆಚರಣೆಯಾಗಿದೆ. "... ಮಾರಿಯನ್ನು ಖುಷಿ ಪಡಿಸಿ, ಊರಿಗೆ ತಟ್ಟಿದ ಅನಿಷ್ಟ, ರೋಗ ಪೀಡೆಗಳನ್ನು ದೂರ ಮಾಡುವುದಕ್ಕೆ ಅಲ್ವೇನೋ ಈ ಕಂಗಿಲು ಕುಣಿಯುವುದು. ಯಾರು ಕಂಗಿಲು ಕುಣಿದರೂ ಮಾರಿಗೆ ಇಷ್ಟವಂತೆ. ನಮ್ಮ ಕಿಟ್ಟುಭಟ್ರು ಯಾವಾಗಲೂ ಹಾಗೆ ಹೇಳ್ತಾ ಇರ್ತಾರೆ ಮಾರಾಯ...." (ಗಾಂಧಿ ಬಂದ ಪು. ಸಂ. ೧೨೨). ಮುಂಡಾಲರೆನ್ನುವ ಜಾತಿಯ ಜನರು ಆಚರಣೆಯಲ್ಲಿ ಭಾಗವಹಿಸುತ್ತಾರೆ. ಸಮಾಜದ ಕೆಳ ಜಾತಿ ಜನಾಂಗದವರು ಈ ಊರಿನ ಅನಿಷ್ಟ ತೆಗೆಯುವ ಸಂಪ್ರದಾಯವನ್ನು ಕಂಗೀಲು ಕುಣಿತದಂತಹ ಕುಣಿತಗಳಲ್ಲಿ ಗುರುತಿಸಬಹುದಾಗಿದೆ.ಮೇಲ್ಜಾತಿ ಮತ್ತು ಕೆಳಜಾತಿಯ ನಡವಿನ ಸಂಘರ್ಷದ ಸೇತುವೆಯಾಗಿಯೂ ಜನಪದ ಕುಣಿತಗಳು ಕ್ರಿಯಾಶೀಲವಾಗಿದೆ

"........ ಸುರುವಿಗೆ ಸುರಗಿ ಮಠಕ್ಕೆ, ನಂತರ ಕುಳಾಯಿಗುತ್ತಿನ ಚಾವಡಿಗೆ, ಅನಂತರ ಪೊಸೊಡಿಗುತ್ತಿನ ಚಾವಡಿ, ನಂತರ ಎಲ್ಲಾ ಕಡೆಗೂ ಮಾಮೂಲು. ........" (ಗಾಂಧಿ ಬಂದ ಪು. ಸಂ. ೧೨೧). ಹೀಗೆ ಇಲ್ಲಿಯ ತುಳುನಾಡಿನ ಸಂಸ್ಕೃತಿಯ ಆಚರಣೆಯು ಏಣಿ–ಶ್ರೇಣಿಯ ಒಳಗೆಯೇ ಚಲಿಸುತ್ತಿರುತ್ತದೆ. ಈ ಎಲ್ಲಾ ಕುಣಿತದ ವೇಷಗಳ ಹಿಂದೆ ದಲಿತ ಜಗತ್ತಿನ ಪ್ರಕೃತಿ – ಸಂಸ್ಕೃತಿಗಳ ಸಂಬಂಧವು ವ್ಯಕ್ತವಾಗುತ್ತದೆ. ಭೂತಾರಾಧನೆಯು ತುಳುನಾಡಿನಲ್ಲಿ ಆಚರಿಸಲ್ಪಡುವ ವಿಶಿಷ್ಟವಾದ ಆಚರಣೆಯಾಗಿದೆ. ಸುಗ್ಗಿ ತಿಂಗಳಿನಲ್ಲಿ ಬೆಳೆಗಳನ್ನು ಕೊಯ್ದು ಮನೆಗೆ ತರುವ ಕಾಲದಲ್ಲಿಯೇ ಭೂತಾರಾಧನೆಯು ನಡೆಯುತ್ತದೆ ಎಂಬುದನ್ನು ಕಾದಂಬರಿ ತಿಳಿಸುತ್ತದೆ. ಭೂತಗಳು ತುಳುನಾಡ ಹಿರಿಯರ ಆತ್ಮಗಳೆಂಬ ನಂಬಿಕೆಗಳಿದ್ದು, ಆ ನಂಬಿಕೆಗಳು ಜಾತಿಯ ಹಿನ್ನೆಲೆಯಲ್ಲಿ ಸ್ಪಷ್ಟವಾಗುತ್ತದೆ. ಭೂತಗಳಿಗೆ ಅವುಗಳದ್ದೇ ಆಹಾರ ಪದ್ಧತಿಯಿದೆ. ಭೂತ ಆವೇಶ ಬಂದು ಕುಣಿಯುವ ಚಪ್ಪರದಡಿ ಊರಿನ ಪೂಜಾರಿಯು 'ಕೊಡಿಯಡಿ'ಯಲ್ಲಿ ಸಸ್ಯಾಹಾರಗಳನ್ನು ಸ್ವೀಕರಿಸಿದರೆ, ಮತ್ತೆ ಕೆಲವು ಮಾಂಸಾಹಾರವನ್ನು ಸ್ವೀಕರಿಸುತ್ತವೆ. ಭೂತಾರಾಧನೆಯ ಪ್ರಾರಂಭದ ಸೂಚನೆಯಾಗಿ 'ಗೊನೆ ಕಡಿಯುವ' ಕ್ರಮವಿದೆ. "...... ಪಗ್ಗುವಲ್ಲಿ ಇಪ್ಪತ್ತೂ್ಮರು ದಿನ ಹೋಗುವಂದು ಕೋಲ. ಬಾಳೆಗೊನೆ ಕಡಿಯುವ ವಿಧಿ ಕೋಲಕ್ಕೆ ಐದು ದಿನವಿರುವಾಗ ಎಂದು ಕಿಟ್ಟುಭಟ್ಟರು ಪಂಚಾಂಗ ಓದಿದರು. ......" (ಗಾಂಧಿ ಬಂದ ಪು. ಸಂ. ೧೨೮). ಹೀಗೆ ಜನಪದ ಭೂತಾರಾಧನೆಯ ಮೇಲೆ ವೈದಿಕ ಪ್ರಭಾವವಾದುದನ್ನು ಗುರುತಿಸಬಹುದು. "...... ಸಂಪ್ರದಾಯದಂತೆ ಕೋಲದ ಮನೆಯ ಯಜಮಾನನ ಕ್ಷೌರ ಮಾಡಲು ಕ್ಷೌರಿಕ ಬಂದ. ಬಂದವ ಸುಮ್ಮನೆ ಯಾಕೆ ಹೋಗಬೇಕೆಂದು ರುಕುಣಿಯಮ್ಮ ದ್ರೌಪದಿಯನ್ನು ಎಳೆತಂದು ಮೊಳೆತ ಎಳೆಕೂದಲನ್ನು ಬೋಳಿಸಿದರು. ಅಮುಣಿಯಮ್ಮನ ಕೇಶಮುಂಡನವೂ ಆಯಿತು. ....." ('ಗಾಂಧಿ ಬಂದ' ಪು.ಸಂ.೧೩೩). ಒಂದು ಆರಾಧನಾ ಸಂಸ್ಕೃತಿಯೊಂದಿಗೆ, ಮೌಢ್ಯವೂ ಜೊತೆಯಲ್ಲಿಯೇ ಬಂದಿದೆ. ದ್ರೌಪದಿ ಹಾಗೂ ಅಮುಣಿಯಮ್ಮರ ಕೂದಲು ಕತ್ತರಿಸುವ ಸಂದರ್ಭದಲ್ಲಿ ಇದು ಕಂಡು ಬರುತ್ತದೆ"...ಭೂತದ ಸ್ಥಾನದೊಳಗಿಂದ 'ಭೂತದ ಭಂಡಾರ' ವನ್ನು ಹೊರ ತರಲು ಭೂತದ ಪೂಜಾರಿ, ದರ್ಶನ ಪಾತ್ರಿ, ವಾದ್ಯ–ವಾಲಗದ ಪರಿವಾರ, ಸುಡುಮದ್ದಿನ ಸರದಾರರೆಲ್ಲರೂ ಸಿದ್ಧರಾಗಿ ನಿಂತಿದ್ದರು. ....." (ಗಾಂಧಿ ಬಂದ ಪು. ಸ. ೧೩೭). ತುಳುನಾಡಿನ ಜನರು ಭೂತದ ಆಚರಣೆಯ ಸಂಭ್ರಮವನ್ನು ಹೀಗೆ ಸ್ವೀಕರಿಸುತ್ತಾರೆ. ಇಲ್ಲಿ ತಿಳಿಸಿದ ಪೂಜೆಯ ಅರ್ಥವನ್ನು ವಿದ್ವಾಂಸರು ಹೀಗೆ ಗ್ರಹಿಸಿದ್ದಾರೆ. "..... ..... ಪೂಜೆಪದ ದ್ರಾವಿಡ ಮೂಲದ್ದು. ದ್ರಾವಿಡರು ಪೂಜೆಯ ಮೂಲಕ ಬಲಿ ಅರ್ಪಿಸುತ್ತಿದ್ದರು. ಆರ್ಯರು ಯಜ್ಞದ ಮೂಲಕ ಅಂದರ ಅಗ್ನಿಯ ಮೂಲಕ ಬಲಿ ಅರ್ಪಿಸುತ್ತಿದ್ದರು. ಹೀಗೆ ಧಾರ್ಮಿಕ ಪೂಜೆಯ ಮೂಲಕ ದೈವ ದೇವರುಗಳನ್ನು ಒಲಿಸಿಕೊಳ್ಳಲು ಸಂತೃಪ್ತಿಪಡುವವನೇ ಪೂಜಾರಿ .... .."[1] ಮನುಷ್ಯ ಜಗತ್ತಿನ ದಿನಚರಿಯಲ್ಲಿ ಪೂಜಾರಿಯಸ್ಥಾನವನ್ನು ವಿಶ್ಲೇಷಿಸಲಾಗಿದೆ.

" ......ತುಳುನಾಡಿನ ಸಂದರ್ಭದಲ್ಲಿ ದೈವಪೂಜೆಯ ಬಹುಪಾಲು ಅಧಿಕಾರ ಬಿಲ್ಲವ ಜನಾಂಗದಲ್ಲಿತ್ತು ಎನಿಸುತ್ತದೆ. ಆ ಕಾರಣಕ್ಕಾಗಿಯೇ ಅವರು ಪೂಜಾರಿಗಳೆಂದು

ಕರೆಸಿಕೊಳ್ಳುತ್ತಿದ್ದಾರೆ. . . . . "[2] ಹೀಗೆ ತುಳುನಾಡಿನಲ್ಲಿ 'ಆಲಿಭೂತ'[3] ಹಾಗೂ ಜುಮಾದಿ ದೈವವನ್ನು ಗಮನಿಸಬಹುದು. ಜುಮಾದಿ, ಬಂಟರು ಆರಾಧಿಸುವ ದೈವವಾಗಿ ಕಾಣಿಸಿಕೊಂಡಿದೆ. ಹೀಗೆ ಭೂತಾರಾಧನೆಯ ಸಂದರ್ಭವು ತುಳುನಾಡಿನ ಜನಪದರ ಬದುಕಿನಲ್ಲಿ ಹಾಸುಹೊಕ್ಕಾಗಿದೆ. ಭೂತಾರಾಧನೆಯ ಸಂಸ್ಕೃತಿ ಸುಂದರವಾಗಿ ಅಭಿವ್ಯಕ್ತವಾಗಿದೆ

ಕಾದಂಬರಿಯಲ್ಲಿ ದ್ರೌಪದಿ – ಅದ್ರಾಮರು ಭೂತದ ಕಣ್ಣಿನಲ್ಲಿ ಒಂದೇ. ದ್ರೌಪದಿಯು ಜನರ ಕಣ್ಣಿಗೆ ವಿಧವೆಯಿರಬಹುದು. ಭೂತದ ಕಣ್ಣಲ್ಲಿ ಬದುಕಿ ಬಾಳಬೇಕಾದವಳು. ಇಲ್ಲಿ ಕಾಣಿಸುವ ಕೆಲವು ಸ್ತ್ರೀ ಪಾತ್ರಗಳು ಸಕಾರಾತ್ಮಕ ಪಾತ್ರಗಳಾಗಿರುವುದು ಕಾದಂಬರಿಯಲ್ಲಿ ಗುರುತಿಸಬೇಕಾದ ಮಹತ್ವದ ಅಂಶ.

". . . . . ಹೌದು. ಅದು ಸಾವಿನ ಡೋಲು! ಹೆಬ್ಬಾರರನ್ನೊಳಗೊಂಡಂತೆ ಎಲ್ಲರ ಎದೆ ಬಡಿತ ನಿಂತಂತಾಯಿತು! ಯಾರ ಸಾವು . . . ." (ಗಾಂಧಿ ಬಂದ ಪು. ಸಂ. ೧೯೮). ಯಾರಾದರು ಊರಲ್ಲಿ ಸತ್ತುಹೋದರೆ ಅದನ್ನು ಊರಿಗೆ ಡಂಗುರ ಸಾರಲು ಕೊರಗ ಜಾತಿಯನ್ನು ಬಳಸಿಕೊಳ್ಳುವ ಸಂದರ್ಭವನ್ನು ಈ ಡೋಲು ಸಾರುತ್ತದೆ. ಚೆನ್ನಾಗಿ ಇರುವುದರ ಜೊತೆಜೊತೆಯಾಗಿ ಈ ಶೂದ್ರರನ್ನು ಶೋಷಿಸುವ ಸಂದರ್ಭವೂ ವ್ಯಕ್ತವಾಗುತ್ತದೆ.

ಕಾದಂಬರಿಯೊಳಗೆ ಸಾವಿನ ಸನ್ನಿವೇಶಗಳಿವೆ. ಸಾವಿನ ಮನೆಯ ಆಚರಣೆಯು ಒಂದು ಜನರ ಜೀವನ ವಿಧಾನವನ್ನು ಪರಿಚಯಿಸುವಂತಹದು. ಸಾವಿನ ದುಃಖದಲ್ಲಿ ಎಲ್ಲರೂ ಒಟ್ಟಿಗೆ ಭಾಗವಹಿಸುತ್ತಾರೆ. ಮೇಲ್ಜಾತಿಯವರು ಸತ್ತರೆ ಶ್ರೇಣೀಕೃತ ವ್ಯವಸ್ಥೆಯೊಳಗೆ ಒಂದು ಅಂತರದಲ್ಲಿ ಸಾವಿನ ಶಾಸ್ತ್ರಕ್ರಿಯೆಗಳಲ್ಲಿ ಕೆಳಜಾತಿಯವರು ಪಾಲ್ಗೊಳ್ಳುತ್ತಾರೆ. ದಾರುವಿನ ತಾಯಿಯ ಸಾವಿನ ಚಿತ್ರಣದಲ್ಲಿ ಭಾಗವಹಿಸುವ ವಿವಿಧ ಜಾತಿಗಳನ್ನು ಹೀಗೆ ವಿಶ್ಲೇಷಿಸಬಹುದು.

". . . . . . ಆಕೆಯ ಮೇಲೆ ವಿಪರೀತ ಗೌರವ ಪ್ರೀತಿ ಪರಜಾತಿಯವರೂ ಅಡ್ಡಬೀಳುವ ಕ್ರಿಯೆ ಆರಂಭಿಸಿದರು. ಅಂತಪ್ಪ–ಕೂಸಮ್ಮೊಲಿ–ಮಂಜಪ್ಪ–ಅಂದ್ರಾಮರೆಲ್ಲರೂ ಏಕಕಾಲದಲ್ಲಿ ಅಡ್ಡಬಿದ್ದರು. ಕಟ್ಟಹುಣಿ, ಗದ್ದೆಯ ಅಂಚಲ್ಲಿ ಕೂತ ಹೊತಿ ಮಾದಿಗ್ಯ ಅಲ್ಲೆ ತಾವು ಕೂತಲ್ಲೇ ಸಾಮೂಹಿಕವಾಗಿ ಅಡ್ಡಬಿದ್ದು ಪ್ರಾರ್ಥಿಸಿದರು". ('ಗಾಂಧಿ ಬಂದ' ಪು. ಸಂ. ೨೨೮) ಎಂಬುದನ್ನು ಗಮನಿಸಿದಾಗ ತುಳುನಾಡ ಜನ ಸಂಸ್ಕೃತಿಯ ಸಾಮರಸ್ಯದ ಒಳನೋಟಗಳನ್ನು ಗುರುತಿಸಬಹುದಾಗಿದೆ.

". . . . . ಮುತ್ತೈದೆ ಸಾವು – ಎಲ್ಲಾದರೂ ಮೂಗುತಿ ಸಿಗುವುದಿದೆಯೇ?. . . . " ('ಗಾಂಧಿ ಬಂದ' ಪು. ಸಂ. ೨೧೩). ಹೀಗೆ ಒಂದು ಸಾವಿನ ಹಿಂದೆ ಸಂಪ್ರದಾಯ, ಆಚಾರ ವಿಚಾರಗಳು ಮನೆಮಾಡಿವೆ. ಮುತ್ತೈದೆತನಕ್ಕೆ ಮಹತ್ವವನ್ನು ಧರ್ಮ ನೀಡಿದೆ. ಹೀಗೆ ಈ

ಕಾದಂಬರಿಯು ತುಳುನಾಡ ಸಂಸ್ಕೃತಿಯನ್ನು ಕಾಯ್ದುಕೊಂಡಿದೆ. "...... ತಾವು ಸಮಾಜದ ಕ್ರೂರ ಅಮಾನವೀಯ ಜಾತಿ ವ್ಯವಸ್ಥೆಯಡಿ ಸಿಲುಕಿ ಅತ್ಯಂತ ಹೀನವಾಗಿ, ತುಚ್ಚವಾಗಿ ಬದುಕುತ್ತಿದ್ದರೂ, ತಮ್ಮ ತಮ್ಮೊಳಗೆ ಅದೇ ಜಾತಿ ತಾರತಮ್ಯವನ್ನು ಉಳಿಸಿಕೊಂಡು, ಅಸ್ಪೃಶ್ಯತೆಯನ್ನು ತಮ್ಮ ಕಲ್ಯಾಣಿಯಂತೆ ಬಹಳ ಜೋಪಾನವಾಗಿ ಕಾಯ್ದುಕೊಂಡಿರುವ ಇವರೆಲ್ಲರೂ ಇದೀಗ ಸಮಾನರೆಂಬಂತೆ ಬೊಜ್ಜದ ಊಟಕ್ಕಾಗಿ ಅಂಗಳದಾಚೆಗೆ ಕಾದು ಕೂತಿದ್ದಾರೆ. (ಗಾಂಧಿ ಬಂದ ಪು. ಸಂ. ೨೨೩) ಎಂಬ ಸನ್ನಿವೇಶವು ಹಸಿವನ್ನು ಚಿತ್ರಿಸುತ್ತಾ, ಶ್ರೇಣೀಕೃತ ವ್ಯವಸ್ಥೆಯ ದುರಂತದ ಸತ್ಯವನ್ನು ತಿಳಿಸುತ್ತದೆ. ಹೀಗೆ ಸಾಂಸ್ಕೃತಿಕ ವಿವರಗಳೊಂದಿಗೆ ಅವುಗಳಲ್ಲಿರುವ ಮೌಢ್ಯ ಮತ್ತು ಜನವಿರೋಧಿ ಧೋರಣೆಗಳು ವ್ಯಕ್ತವಾಗಿವೆ.

## ಕಾದಂಬರಿಯಲ್ಲಿ ಮೂಡಿದ ದಕ್ಷಿಣ ಕನ್ನಡದ ಸ್ವಾತಂತ್ರ್ಯ ಹೋರಾಟದ ಚಿತ್ರಣ

ಗಾಂಧಿ ಬಂದ ಕಾದಂಬರಿಯನ್ನು ಅಧ್ಯಯನಕ್ಕೆ ಮಾಡಿದಾಗ ಸ್ವಾತಂತ್ರ್ಯ ಚಳುವಳಿಯಲ್ಲಿ ಅವಿಭಜಿತ ದಕ್ಷಿಣ ಕನ್ನಡದ ಜನರು ತೊಡಗಿಸಿಕೊಂಡ ರೀತಿಯನ್ನು ಗುರುತಿಸಬಹುದು. ಕಾರ್ನಾಡ್ ಸದಾಶಿವರಾಯ, ಮಾರಪ್ಪ, ಅದ್ರಾಮ, ತಿಂಗಳಾಯರು, ಪಾಂಡು ಶೆಟ್ಟಿ, ಪೊಸೊಡಿಗುತ್ತಿನ ತೌಡ ಶೆಟ್ಟರು, ಜಾರಿಗೆಬೆಟ್ಟಿನ ಸುಬ್ಬಯ್ಯ ಶೆಟ್ಟರು, ಕಿಟ್ಟು ಭಟ್ಟರು, ಅಂತಪ್ಪ, ಕೂಸಮ್ಮೈಲಿ, ಅಂಗರ ಮೂಲ್ಯ, ಪಿಜಿನಮೂಲ್ಯ, ದಾರು, ದ್ರೌಪದಿ, ಪುಟ್ಟಮ್ಮಕ್ಕ ಹಾಗೂ ಮೇಲ್ಜಾತಿ, ಶೂದ್ರವರ್ಗದ ಮತ್ತು ದಲಿತರು ತುಳುನಾಡಿನ ಸ್ವಾತಂತ್ರ್ಯ ಚಳುವಳಿಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಇವರು ಸ್ವಾತಂತ್ರ್ಯ ಹೋರಾಟದೊಂದಿಗೆ ಗಾಂಧಿ ತತ್ವವನ್ನು ಅನುಷ್ಠಾನ ಮಾಡುವಲ್ಲಿ ಅವರವರ ಶಕ್ತಿ ಮೀರಿ ದುಡಿಯುತ್ತಾರೆ. ಗಾಂಧಿ ನಿಧಿಯೊಂದನ್ನು ಗಾಂಧಿವಾದಿಗಳು ಸ್ಥಾಪಿಸುತ್ತಾರೆ. ಆ ಮೂಲಕ ಮೇಲ್ಜಾತಿಯವರಲ್ಲಿ ದುಡಿಯುವವರ್ಗದವರ ಹತ್ತಿರ ಹಣ ಸಂಗ್ರಹಿಸುತ್ತಾರೆ. ಗಾಂಧಿ ತತ್ವಗಳನ್ನು ತನ್ನುಸಿರಾಗಿ ಮಾಡಿಕೊಂಡಿರುವ ಮಾರಪ್ಪ ಈ ಜವಾಬ್ದಾರಿಯನ್ನು ಹೊತ್ತುಕೊಳ್ಳುತ್ತಾನೆ.

"......ಕುಳಾಯಿಗುತ್ತಿನ ಪಾಂಡುಶೆಟ್ಟರು ಗಾಂಧಿಯವರ ನಿಧಿಗೆ ನೂರೊಂದು ರೂಪಾಯಿ ಕೊಟ್ಟರೆ, ಪೊಸೊಡಿಗುತ್ತಿನ ತೌಡ ಶೆಟ್ಟರು ಐವತ್ತೊಂದು ರೂಪಾಯಿ, ಜಾರಿಗೆಬೆಟ್ಟಿನ ಸುಬ್ಬಯ್ಯ ಶೆಟ್ಟರು, ಇಪ್ಪತ್ತೈದು ರೂಪಾಯಿ, ಕಿಟ್ಟು ಭಟ್ಟರು ಮೂರು ವರಾಹ ಕೊಟ್ಟರು. ಎಲ್ಲರು ಅನುಕೂಲ ಅಂತಸ್ತಿಗೆ ತಕ್ಕಂತೆ ಗಾಂಧಿ ನಿಧಿಗೆ ತಮ್ಮ ವಂತಿಗೆ ನೀಡಿ ಗಾಂಧಿಯವರಿಗೆ ಎದುರು ನೋಡತೊಡಗಿದರು. ......" ('ಗಾಂಧಿ ಬಂದ' ಪು.ಸಂ ೧೬೧-೧೬೨). ಜಮೀನ್ದಾರರ ಶೋಷಣೆಯ ಹೊರತಾಗಿಯೂ ಎಲ್ಲಾ ವರ್ಗದ ಜನರಲ್ಲಿ, ಸ್ವಾತಂತ್ರ್ಯದ ಹೋರಾಟದ ಕಿಚ್ಚು ಜನರಲ್ಲಿ ದೇಶ ಪ್ರೇಮವನ್ನು ಹುಟ್ಟಿಸಿದೆ. ಜೊತೆಗೆ ದಾಸ್ಯದ ನೊಗನೇಗಿಲುಗಳನ್ನು ಹೊತ್ತು ಜನರು ಕಂಗಾಲಾಗಿದ್ದಾರೆ. ಇವರಿಗೆ ಬಿಡುಗಡೆ ಬೇಕಾಗಿತ್ತು. ನೊಂದ ತುಳುನಾಡ ಜನಸಮೂಹ ಗಾಂಧಿಯನ್ನು ತಮ್ಮೆಲ್ಲ ಕಷ್ಟ ಪರಿಹಾರ ಮಾಡುವ ಶಕ್ತಿ ಎಂದು ನಂಬಿದ್ದಾರೆ. ಅಂತಪ್ಪ, ಕೂಸ ಮ್ಮೈಲಿ, ಅಂಗರ ಮೂಲ್ಯ ಇವರುಗಳು 'ಕಳ್ಳು ಕುಡಿಯಲು' ಕೂಡಿಟ್ಟ ಹಣವನ್ನು ನೀಡುತ್ತಾರೆ. ಈ ಹಿನ್ನಲೆಯಲ್ಲಿ ಈ

ಮಾತು ಗಮನಾರ್ಹವಾದುದು. ಗಾಂಧಿಯ ವ್ಯಕ್ತಿತ್ವ ಸಾಮಾನ್ಯ ಜನರ ಬದುಕಿನಲ್ಲಿ ಬೀರುತ್ತಿರುವ ಪರಿಣಾಮಕ್ಕೆ ಸಾಕ್ಷಿಯಾಗಿದೆ.

"........ ಗಾಂಧಿ ಎಂಬಾತ ಒಬ್ಬ ಅವತಾರ ಪುರುಷನೋ, ಸಮಾಜ ಪರಿವರ್ತಕನೋ ಅಥವಾ ಯಾವುದೋ ಒಬ್ಬ ಮಹಾನ್ ವ್ಯಕ್ತಿ-ಶಕ್ತಿಯಾಗಿರಬೇಕು ಎಂಬ ಊಹೆಯಿಂದಲೇ ಈ ಹಣವನ್ನು ಜೋಡಿಸಿಟ್ಟು ಆತನಿಗೆ ಅರ್ಪಿಸುತ್ತಿದ್ದಾರೆ ಎಂದರೆ ಎಂಥವನೂ ಸಂತಸದಿಂದಲೇ ಮೂಕನಾಗಬಹುದು ......" ('ಗಾಂಧಿ ಬಂದ' ಪು.ಸಂ ೧೬೨). ಇದು ಈ ಮುಗ್ಧ ಜೀವಿಗಳು ಬದುಕುವ ಜೀವನೋತ್ಸಾಹವನ್ನು ರೂಢಿಸಿಕೊಳ್ಳುವ ಪ್ರಯತ್ನವಾಗಿದೆ. ಹಾಗೆಯೇ ಗಾಂಧಿಯ ಬರುವಿಕೆಯ ಮೂಲಕ ಸ್ಥಿತ್ಯಂತರಗೊಳ್ಳುವ ಎಲ್ಲಾ ಸಾಧ್ಯತೆಗಳ ಮುನ್ಸೂಚನೆಗಳಿವೆ. ಗಾಂಧಿವಾದ ಈ ಪ್ರದೇಶದ ಜನರ ಮೇಲೆ ಬೀರಿದ ಪ್ರಭಾವವನ್ನು ಗುರುತಿಸಬಹುದಾಗಿದೆ. ಗಾಂಧಿಯ ಪಾನ ನಿಷೇಧ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಗಾಂಧಿವಾದಿಗಳು ತೊಡಗಿಸಿಕೊಂಡು ತುಳುನಾಡಿನ ಜನರಿಗೆ ಮಾಹಿತಿ ನೀಡುತ್ತಾರೆ. ಮಾರಪ್ಪ, ತಿಂಗಳರಾಯರು, ಕಾರ್ನಾಡರು ಪ್ರಚಾರ ಕಾರ್ಯವನ್ನು ಬಿರುಸುನಿಂದ ಕೈಗೊಳ್ಳುತ್ತಾರೆ. ವಿದೇಶಿ ಬಟ್ಟೆಗಳನ್ನು ಉಪಯೋಗಿಸದಂತೆ ಜನರಿಗೆ ತಿಳುವಳಿಕೆ ಕೊಡುತ್ತಾರೆ. ಸ್ವದೇಶಿ ಚಳುವಳಿಗಳಾದ ಉಪ್ಪಿನ ಸತ್ಯಾಗ್ರಹವನ್ನು ತಮ್ಮ ಗೆಲುವಿನ ಅಸ್ತ್ರವಾಗಿ ಜನರು ಉಳಿಸಿಕೊಳ್ಳುತ್ತಾರೆ. ಇವರು ತಿನ್ನುವ ಉಪ್ಪಿಗೆ ತೆರಿಗೆ ವಿಧಿಸಿದಾಗ, ತಮ್ಮೆಲ್ಲರ ಸಾಮೂಹಿಕ ಒಗ್ಗಟ್ಟಿನ ಮೂಲಕ ಜನರಿಗೆ ವಿರೋಧಿಸಲು ಗಾಂಧಿವಾದಿಗಳು ಸಲಹೆ-ಸೂಚನೆ ನೀಡಿದರು. ಈ ಎಲ್ಲಾ ಹೋರಾಟಗಳು ತುಳುನಾಡಿನ ಜನರು ಹೊಸ ಮೌಲ್ಯಗಳ ಸಂಕೇತವಾಗಿ ಸ್ವೀಕರಿಸುವಂತೆ ಮಾಡಿದೆ.

ಗಾಂಧಿಯ ಬಗ್ಗೆ ಆಳವಾದ ತಿಳುವಳಿಕೆ ಸಿಗದ ಸಂದರ್ಭದಲ್ಲಿ ಮಾರಪ್ಪನು ಈ ಕೆಲಸವನ್ನು ಕೈಗೊಳ್ಳುತ್ತಾನೆ. "...... ಬಡತನವೇ ತಾಂಡವವಾಡುತ್ತಿರುವ ಬೆಸ್ತರ ಕೇರಿಯಲ್ಲಿ ಪರದೇಶೀ ವಸ್ತ್ರದ ಉಸಿರಿಲ್ಲದಿದ್ದರೂ, ಹಾಗೆಯೇ ಖಾದಿ ಬಟ್ಟೆಯನ್ನು ಕೊಳ್ಳುವ ತಾಕತ್ತಿಲ್ಲದಿದ್ದರೂ, ಖಾದಿ ಚರಕದ ಶಕ್ತಿಯೇನೆಂಬುದನ್ನು ಮನಸ್ಸಿನೊಳಗೆ ಬಿತ್ತುವ ಅನಿವಾರ್ಯತೆ ಮಾರಪ್ಪನಿಗಿತ್ತು. . . . " (ಗಾಂಧಿ ಬಂದ ಪು.ಸಂ. ೮೪). ಇಲ್ಲಿ ಮಾರಪ್ಪನಿಗೆ ಇಡಿ ಹಳ್ಳಿಯ ಜನರು ಬದಲಾಗಬೇಕೆಂಬ ತೀವ್ರ ಕಾಳಜಿ ಇದೆ. ತಮ್ಮ ಶಕ್ತಿಯೇನು? ತಮ್ಮ ಸಂಪನ್ಮೂಲಗಳನ್ನು ಬಳಸುವುದರಿಂದ ಆಗುವ ಸ್ವಾತಂತ್ರ್ಯದ ಸುಖವೇನು? ಎಂಬುದನ್ನು ಜನರಿಗೆ ತಿಳಿಸಬೇಕಾಗಿತ್ತು. ದುಡಿಯುವ ವರ್ಗದವರಿಗೆ ಇವನ ಉಪದೇಶವನ್ನು ಕೇಳುವ ತಾಳ್ಮೆ ಇಲ್ಲದಾಗ ಅವರ ಬೈಗುಳಗಳಿಗೆ ಗುರಿಯಾಗುತ್ತಿದ್ದ. ಎಲ್ಲವನ್ನು ಸಹಿಸಿಕೊಂಡು ಕ್ರಾಂತಿಯಲ್ಲಿ ತೊಡಗಿಸಿಕೊಂಡಿರುವುದು ಈ ಭಾಗದ ಕೆಲವು ಸ್ಥಳೀಯ ನಾಯಕರು ಪಾಲ್ಗೊಂಡ ರೀತಿಗೆ ಸಾಕ್ಷಿಯಾಗಿದೆ.

ಗಾಂಧಿಯವರ ಪಾನ ನಿಷೇಧದ ಬಗ್ಗೆ ತಿಳುವಳಿಕೆ ನೀಡುತ್ತಾ ದುಡಿಯುವ ವರ್ಗದವರಾದ ಬೆಸ್ತರ ಅಪಹಾಸ್ಯ, ನಿಂದನೆಗಳಿಗೆ ಮಾರಪ್ಪ ಪ್ರಾರಂಭದಲ್ಲಿ ಗುರಿಯಾಗುವುದು ಇಲ್ಲಿ ವ್ಯಕ್ತವಾಗಿದೆ.

". . . . . . .ಓಯ್ ಶೆಟ್ರೇ, ಗಾಂಧಿಯವರು ನಮ್ಮೂರಿಗೆ ಬಂದಾಗ ನಾವೆಲ್ಲಾ ಚಿನ್ನದ ದೋಣಿಯೊಂದನ್ನು ಅವರಿಗೆ ದಾನ ಕೊಡುತ್ತೇವೆ. ನೀವೀಗ ಹೊರಡಿ, ನಡೀರಿ, ನಡೀರಿ ಎಂದು ಬಲವಂತವಾಗಿ ಆತನನ್ನು ಖಾದಿ ಸಮೇತ ಎಬ್ಬಿಸಿ ತನ್ನ ಸೀಮೆ ದಾಟಿಸಿ ಬಂತು. . . . ." (ಗಾಂಧಿ ಬಂದ ಪು.ಸಂ. ೮೫). ಹೀಗೆ ಮಾನಾಪಮಾನಗಳ ಲೆಕ್ಕಿಸದೆ ಮಾರಪ್ಪನ ಕ್ರಾಂತಿ ಎಲ್ಲ ನೆಲೆಯಲ್ಲಿ ಸುಧಾರಿಸಿಕೊಳ್ಳುತ್ತಾ ನಡೆಯಿತು. ಕೂಲಿಯಾಳುಗಳ ವರ್ಗಕ್ಕೆ ಹೊಟ್ಟೆಪಾಡಿನ ಪ್ರಶ್ನೆ ಮುಖ್ಯವಾಗುತ್ತದೆ. 'ಎಲ್ಲಿಯವರೆಗೆ ಅರಿವು ಸಿಗುವುದಿಲ್ಲ, ಅಲ್ಲಿಯ ವರೆಗೆ ಕ್ರಾಂತಿಯ ಪದ ಅರ್ಥವಾಗದು'. ಅರ್ಥೈಸುವ ಹೆಚ್ಚಿನ ಹೊಣೆಗಾರಿಕೆ ಮಾರಪ್ಪನ ಮೇಲಿದೆ. ಇದನ್ನು ಕಾರ್ಯಗೊಳಿಸುವಲ್ಲಿ ಸಕ್ರಿಯನಾಗಿದ್ದಾನೆ. ಕಾರ್ನಾಡರು ಗಾಂಧಿಯ ತತ್ವಗಳಲ್ಲಿ ಒಂದಾದ ವಿಧವಾ ವಿವಾಹದ ಪ್ರೋತ್ಸಾಹವನ್ನು ನೀಡುವುದರ ವಿವರಣೆ ಕಾದಂಬರಿಯಲ್ಲಿದೆ. ದ್ರೌಪದಿಯು ಬಾಲವಿಧವೆಯಾಗಿದ್ದಾಗ ಆಕೆಗೆ ಬ್ಯಾರಿ ಹುಡುಗನಾದ ಅದ್ರಾಮನೊಂದಿಗೆ ಮದುವೆ ಮಾಡಿಸುವುದು ಗಾಂಧಿ ವಾದಿಗಳ ನಿಲುವಾಗಿತ್ತು. ಇಂಥ ಕ್ರಾಂತಿ ಗಾಂಧಿವಾದಿಗಳಿಂದ ನಡೆಯುತ್ತದೆ.

". . . . .  ಜೀವನದಲ್ಲಿ ಯಾವ ಅಸ್ತಿತ್ವವೂ ಇಲ್ಲದ ವಿಧವೆಯರನ್ನು ಮರುವಿವಾಹಕ್ಕೆ ಪ್ರೋತ್ಸಾಹಿಸಲು ತಾನು ಕಂಕಣಬದ್ಧನಾಗಿರುವ ವಿಚಾರವನ್ನು ಕಾರ್ನಾಡರು ಶಾನುಭೋಗರಿಗೆ ಹೇಳಿದೊಡನೆ, ಅವರ ಅಂತರಂಗದ ಸಮಸ್ತ ಚಟುವಟಿಕೆಗಳು ಒಂದು ಘಳಿಗೆ ಸ್ತಬ್ದವಾದವು. . . . ." ('ಗಾಂಧಿ ಬಂದ' ಪು.ಸಂ. ೧೦೪). ಶಾನುಭೋಗರು ದ್ರೌಪದಿಯ ಮಾವ. ಇವರ ಅಂತರ್ಯದಲ್ಲಿ ಸೊಸೆಯ ಮೇಲೆ ಕರುಣೆ, ಪ್ರೀತಿ ಇದೆ. ಆದರೆ ". . . .ಮನುಷ್ಯತ್ವ ಭಾವನೆಗಳು, ತುಮುಲಗಳು, ಒಳ ಒತ್ತಡಗಳು ಎಂಥಾ ಕಟ್ಟುನಿಟ್ಟಿನ ಬ್ರಾಹ್ಮಣ್ಯವನ್ನು, ಸಂಪ್ರದಾಯವನ್ನು ಮೀರುವಂಥವು ಎಂಬುದನ್ನು ಶಾನುಭೋಗರು ಬಲ್ಲರು. . . . ." ('ಗಾಂಧಿ ಬಂದ' ಪು.ಸಂ. ೧೦೫). ಇಲ್ಲಿ ರಾಷ್ಟ್ರೀಯ ಚಳುವಳಿಯ ತತ್ವಗಳು ಎರಡು ಧರ್ಮಗಳ ನಡುವಿನ ಅಂತರವನ್ನು, ಸಂಪ್ರದಾಯದ ದೋಷಗಳನ್ನು ಬಯಲು ಮಾಡಿದೆ. ಮೂಢ ನಂಬಿಕೆಗಳ ಮೀರಿ ಯೋಚಿಸಿದಾಗಲೇ ಆರೋಗ್ಯಪೂರ್ಣ ಸಮಾಜವನ್ನು ನಿರ್ಮಿಸಲು ಸಾಧ್ಯವಿದೆ ಎಂಬುದನ್ನು ಈ ಸನ್ನಿವೇಶಗಳು ಸ್ಪಷ್ಟಪಡಿಸುತ್ತದೆ. ಕಾರ್ನಾಡರು ಸ್ವಾತಂತ್ರ್ಯವನ್ನು ಗಳಿಸಲು ಖಾದಿ ಬಟ್ಟೆಯ ಉತ್ಪಾದಿಸುವಿಕೆಯನ್ನು ಮುಂದಿಟ್ಟರು. ನಮ್ಮದು ಪ್ರಾಕೃತಿಕ ಸಂಪನ್ಮೂಲಗಳ ಮಣ್ಣು. ಇಲ್ಲಿ ಹೇರಳವಾಗಿ ಹತ್ತಿಯ ಬೆಳೆಯುವ ಮೂಲಕ ಸ್ವಾವಲಂಬಿಗಳಾಗುವ. ಆ ಮೂಲಕ ಖಾದಿ ತಯಾರಿಯ ಕೆಲಸವನ್ನು ಸೃಷ್ಟಿಸಬಹುದು ಎಂಬ ಸಲಹೆಯನ್ನು ಕಾರ್ನಾಡರು ಬಡವರಿಗೆ ನೀಡಿದಾಗ ಅವರಲ್ಲಿ ಬದಲಾವಣೆ ಸಾಧ್ಯವಾಯಿತು.

". . . . .  ಇನ್ನು ಮುಂದೆ ಐರಿಷ್ ಕಲೆಕ್ಟರು ಬಂದರೆ ಅವರ ಕುದುರೆಗೆ ಉದ್ದಂಡ ನಮಸ್ಕಾರ ಮಾಡುವುದು ಬೇಡ ಎಂದು ನಿರ್ಧರಿಸಿತು ಪಣಂಬೂರು ಜನತೆ. . . . " (ಗಾಂಧಿ ಬಂದ ಪು.ಸಂ. ೧೦೮). ಬ್ರಿಟಿಷರನ್ನು ಒಳಗಿನ ಶ್ರೇಣೀಕೃತ ವ್ಯವಸ್ಥೆಯೊಳಗೆ ಆಳುವ ಬ್ರಾಹ್ಮಣರನ್ನು ಒಟ್ಟಿಗೆ ಶೂದ್ರರು

ನಿರಾಕರಿಸಲು ಪ್ರಾರಂಭಿಸಿದರು. ಇದು ಗಾಂಧಿ ಹೋರಾಟದ ಮೂಲಕ ರಾಷ್ಟ್ರೀಯ ಭಾವನೆಗಳನ್ನು ಕಟ್ಟುವುದರ ಮೂಲಕ ಸಾಧ್ಯವಾಗಿದೆ ಎಂದು ಕಾದಂಬರಿ ಅಭಿವ್ಯಕ್ತಗೊಳಿಸುತ್ತದೆ.

ಗಾಂಧಿ ಮೌಲ್ಯಗಳು ಪಣಂಬೂರು ದೇವಸ್ಥಾನ ಆಗಿನ ಅರ್ಚಕ ಭೂತೈತಾಳರ ಸಂಪ್ರದಾಯ, ಮಡಿ, ಮೈಲಿಗೆಯೊಳಗೆ ಸಂದಿಗ್ಧತೆಯನ್ನು ತಂದಿತು. ಒಟ್ಟೊಟ್ಟಿಗೆ ಶೂದ್ರರು, ಕಾರ್ನಾಡರು ಕುಳಿತುಕೊಳ್ಳುವ ಸ್ಥಿತಿಯನ್ನು ಅರ್ಚಕರಿಗೆ ಅರಗಿಸಿಕೊಳ್ಳುವುದು ಕಷ್ಟವಾಗುತ್ತದೆ. ಮನುಷ್ಯತ್ವದ ವಿಶಾಲ ದೃಷ್ಟಿಕೋನಗಳು ಸಂಕುಚಿತ ಆಲೋಚನೆಗಳನ್ನು ಅಳಿಸಿ ಹಾಕುತ್ತದೆ ಎಂಬುದು ಕಾದಂಬರಿಯ ನೆಲೆಯಿಂದ ವ್ಯಕ್ತವಾಗುತ್ತದೆ. ಕಾರ್ನಾಡರು ಗಾಂಧಿ ಚಿಂತನೆಯ ಪ್ರಭಾವದಿಂದ ದೇವಸ್ಥಾನದ ಒಳಗೆ ಹೋಗುವ ಅವಕಾಶವನ್ನು ದಲಿತರು ಪಡೆಯಲು ಹೋರಾಟ ಮಾಡಿದಾಗ ಪೂಜೆ ವಿಧಿ ವಿಧಾನಗಳನ್ನು ಜತನದಿಂದ ರಕ್ಷಿಸಿಕೊಂಡು ಬಂದ ಐತಾಳರು ಈ ರೀತಿ ಕಾರ್ನಾಡರರನ್ನು ಪ್ರಶ್ನಿಸುವುದು ಗಾಂಧಿ ಚಿಂತನೆಗಳಿಗೆ ಮೇಲ್ಜಾತಿಯ ಜನ ತೋರಿದ ಪ್ರತಿಕ್ರಿಯೆಗೆ ಸಾಕ್ಷಿಯಾಗಿದೆ.

"... . . ನೀವು ಮಾರಪ್ಪನಲ್ಲಿ ನನಗೆ ಚರಕ – ತಕಲಿ ಕೊಟ್ಟು ನೂಲಲು ಹೇಳಿ ಕಳುಹಿಸಿದ್ದು ಹೌದು. ನಾನು ನೂಲಬೇಕೋ, ನಂದಿನೇಶ್ವರನಿಗೆ ಪೂಜೆ ಕೈಂಕರ್ಯ ಸಲ್ಲಿಸಬೇಕೋ. . . . ನೀವೆ ಹೇಳಿ ಕಾರ್ನಾಡರೆ. . .. " (ಗಾಂಧಿ ಬಂದ ಪು.ಸಂ. ೧೧೯). ಈ ಮೂಲಕ ಐತಾಳರ ಧರ್ಮದ ಸೂಕ್ಷ್ಮ ಏಕನೆಲೆ ಆಲೋಚನೆಗಳನ್ನು ಕಾರ್ನಾಡರು ಒಡೆಯುವ ಕೆಲಸ ನಡೆಯುತ್ತದೆ. ಜೊತೆಗೆ ನಮ್ಮ ಸಾಂಸ್ಕೃತಿಕ ಪ್ರತೀಕವಾದ ದೇವಸ್ಥಾನದ ಕಲೆಯನ್ನು ಬ್ರಿಟೀಷರು ಕೊಳ್ಳೆಹೊಡೆಯುವ ಮುನ್ಸೂಚನೆಯನ್ನು ಅರ್ಚಕರಿಗೆ ತಿಳಿಸುತ್ತಾರೆ. ಕಾರ್ನಾಡರ ಇನ್ನೊಂದು ಮುಖ್ಯ ಉದ್ದೇಶ ಈ ನೆಲೆಯಲ್ಲಿ ಎಲ್ಲಾ ಜಾತಿಯ ಜನರು ಸಾಮರಸ್ಯವನ್ನು ಬೆಸೆಯುವುದು. ಜಾತಿಗಳು ದೇವಸ್ಥಾನದೊಳಗೆ ಪ್ರವೇಶವನ್ನು ಪಡೆದುಕೊಳ್ಳುವ ಸಂದರ್ಭವನ್ನು ಅರ್ಚಕರ ಮುಂದಿಡುತ್ತಾರೆ. ಅದರಲ್ಲಿ ಸ್ವಲ್ಪ ಮಟ್ಟಿನ ಯಶಸ್ಸನ್ನು ಪಡೆಯುತ್ತಾರೆ.

". . . . ಬರುವ ಪಣಂಬೂರು ಜಾತ್ರೆಯಂದು ಎಲ್ಲಾ ಜಾತಿಯವರಿಗೂ ದೇವಸ್ಥಾನದೊಳಗೆ ಬ್ರಾಹ್ಮಣರ ಪಂಕ್ತಿಯಲ್ಲೇ ಊಟ ಬಡಿಸಬೇಕು ಎಂಬುದೇ ಕಾರ್ನಾಡರ ಹಿತವಚನ. ಸರ್ವಜಾತಿಗೂ ನಂದಿನೇಶ್ವರ ದೇವನಲ್ಲವೇ. . . .." (ಗಾಂಧಿ ಬಂದ ಪು.ಸಂ. ೧೧೧) ಎಂದು ಅರ್ಚಕರ ಮುಂದೆ ತಿಳಿಸಿದಾಗ ವಿರೋಧ ವ್ಯಕ್ತವಾಯಿತು. ಈ ವಿರೋಧಗಳೇ ಮುಂದೊಂದು ದಿನ ಸಂಘರ್ಷದ ನೆಲೆಯಲ್ಲಿ ಸಾಮರಸ್ಯ ಕಂಡುಕೊಳ್ಳುವುದು ಸಾಧ್ಯವಾಗುವುದು. ಹೀಗೆ ಧರ್ಮದ ಅಂಧಕಾರವನ್ನು ಇನ್ನೊಂದು ಹೋರಾಟಗಾರ ಪಾತ್ರವಾದ ತಿಂಗಳರಾಯರು ಗಾಂಧಿ ತತ್ವದಡಿಯಲ್ಲಿ ಒಡೆಯಲು ಶ್ರಮಿಸಿದರು. ದುಡಿಯುವ ವರ್ಗದ ಬಗ್ಗೆ ಕಾಳಜಿಯಿಂದ ಅವರು ಪ್ರಮುಖ ವಾಹಿನಿಗೆ ಬರಬೇಕೆಂದು, ಆ ಮೂಲಕ ಅವರು ನೀಡುವ ತೆರಿಗೆಗಳು ಮೈಲಿಗೆ ಉಂಟು ಮಾಡುತ್ತದೆಯೇ ಎಂದು ಶೂದ್ರರ ಪರವಾಗಿ ಪ್ರಶ್ನಿಸುವ ತಿಂಗಳರಾಯರು ಮುಖ್ಯವಾಗುತ್ತಾರೆ.

"...... ನಿಮ್ಮ ಜಾತಿಗೆ ಬೆಂಕಿ ಬೀಳ್ಲಿಕ್ಕೆ. . . ." (ಗಾಂಧಿ ಬಂದ ಪು.ಸಂ. ೧೧೦) ಎಂದು ಇಡೀ ಜಾತಿಯ ಬುಡವನ್ನೇ ಅಲುಗಾಡಿಸಿದರು. ವಿಶ್ವಭ್ರಾತೃ ಪ್ರೇಮದ ಮೂಲಕ ಮಾತ್ರ ಸಮಾನ ಚಿಂತನೆ, ಸಮಾನತೆಯ ನೆಲೆಯ ಬದುಕನ್ನು ಅನುಭವಿಸಲು ಸಾಧ್ಯ ಎಂಬುದು ಗಾಂಧಿ ತತ್ವವನ್ನು ಗಟ್ಟಿಗೊಳಿಸಲು ಯತ್ನಿಸಿದರು.

ಗಾಂಧಿ ತತ್ವಗಳನ್ನು ಅನುಷ್ಠಾನಕ್ಕೆ ತರಲು ಖಾದಿ ಬಟ್ಟೆಯನ್ನು ಉತ್ಪಾದಿಸುವ ಪ್ರಚಾರದಲ್ಲಿ ಗುತ್ತಿನ ಶೆಟ್ಟರು ತೊಡಗಿಕೊಂಡರು. ಖಾದಿ ಸೀರೆಗಳನ್ನು ತಂದು ಜನಸಾಮಾನ್ಯರಿಗೆ ಅದರ ಕುರಿತು ಮಾಹಿತಿ ನೀಡಿದರು. ಗಾಂಧೀಜಿಯ ಸ್ವದೇಶೀ ಚಳುವಳಿಯ ಕುತೂಹಲ, ನಿರೀಕ್ಷೆ, ಕನಸುಗಳು ಶ್ರೀಮಂತರನ್ನು ಮುಟ್ಟಲಿಲ್ಲ. ಇವರು ವಿದೇಶಿ ಬಟ್ಟೆಯನ್ನು ಕೊಂಡುಕೊಂಡರು. ಅದರ ಹೊಳಪಿಗೆ ಮಾರುಹೋದರು. ಅಂತಸ್ತು, ಪ್ರತಿಷ್ಠೆಯನ್ನು ಮುರಿಯಲು ಖಾದಿ ಕ್ರಾಂತಿ ಎಚ್ಚರಿಕೆ ನೀಡಿತು. ಕಾದಂಬರಿಯ ಪ್ರಮುಖ ಪಾತ್ರವಾದ ಹೆಬ್ಬಾರರು ಖಾದಿಯನ್ನು ತುಂಬಾ ನಾಜೂಕು ಮಾತುಗಳಿಂದ ತಿರಸ್ಕರಿಸುತ್ತಾರೆ. ತಾವು ಮೇಲ್ಜಾತಿಯವರು ಈ ಕೆಲಸವನ್ನು ಮಾಡಲು ಆಗದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಇದೆಲ್ಲಾ ಮುಂದೆ ಸಂಘರ್ಷಕ್ಕೆ ದಾರಿಯಾಗುತ್ತದೆ. ದುಡಿಯುವ ವರ್ಗಕ್ಕೆ ನಿಧಾನವಾಗಿ ಗಾಂಧಿಯ ಮೌಲ್ಯಗಳು ಅರ್ಥವಾಗತೊಡಗಿದವು. ಸಾಗರದಂತೆ ಜನಸಮೂಹ ಮುಂದೆ ಕ್ರಾಂತಿಯಲ್ಲಿ ಪಾಲ್ಗೊಳ್ಳುತ್ತಾರೆ.

ಗಾಂಧಿ ಮೌಲ್ಯವನ್ನು ಜನರಿಗೆ ತಿಳಿಸುವಲ್ಲಿ ದ್ರೌಪದಿಯಂಥ ಮಹಿಳೆಯಲ್ಲಿ ಮಹತ್ವದ ಪಾತ್ರವಹಿಸುತ್ತಾರೆ. ದುಡಿಯುವ ವರ್ಗದೊಂದಿಗೆ ಬಾಲ್ಯದಿಂದಲೇ ಅನ್ಯೋನ್ಯತೆ ಬೆಳೆಸಿಕೊಂಡು ಬಂದವಳೀಕೆ. ಇವಳ ಬದುಕಿನ ಆಘಾತಗಳು ಈಕೆಯಲ್ಲಿ ಪ್ರೀತಿಯ ಕೊರತೆಯನ್ನುಂಟು ಮಾಡಿದವು. ಆ ಕೊರತೆಯನ್ನು ಶೂದ್ರ ಕುಟುಂಬಗಳು ತುಂಬಿದವು. ಹೀಗಿದ್ದಾಗಲೇ ಈಕೆಯು ಅಂತಪ್ಪ, ಕೂಸ ಮೊಯಿಲಿ, ಅಂಗರ ಮೂಲ್ಯಾದಿಗಳಿಗೆ ಗಾಂಧಿಯ ಕುರಿತ ಮಾಹಿತಿ ನೀಡುತ್ತಾಳೆ. ಈ ಎಲ್ಲಾ ಕಾರಣಗಳಿಗೆ "..... ತಕಲಿ, ಚರಕ ಗಾಂಧಿಯೆಂದರೆ ಆ ದುಡಿದು ತಿನ್ನುವ ಆಳುಗಳಿಗೆ ಅದೇನೋ ಬ್ರಾಂ. . . ಬ್ರೂಂ. . . ಶ್ಲೋಕ ಮಂತ್ರದಷ್ಟೇ ಅಪೂರ್ವ ಎಂದೆನಿಸಿರಬೇಕು. (ಗಾಂಧಿ ಬಂದ ಪು.ಸಂ. ೧೬೩). ಹೀಗೆ ಜೀವನದಲ್ಲಿ ಯಾವ ವೈಚಾರಿಕತೆಯ ಅರಿವಿಲ್ಲದ ಈ ಜನರು ಅನೇಕ ಗಾಂಧೀ ಅನುಯಾಯಿಗಳ ಮೂಲಕ 'ಜನಮಾನಸ' ಕ್ಕೆ ಬರಲು ಸಾಧ್ಯವಾಯಿತು. ದ್ರೌಪದಿಯು ತನ್ನ ಮೊದಲ ಗಂಡನಾದ ನರಹರಿಯು ಸತ್ತುಹೋದಾಗ ಷರಟಿನ ಚಿನ್ನದ ಗುಂಡಿಯನ್ನು ಜೋಪಾನವಾಗಿ ಕಾಯ್ದಿಟ್ಟಿದ್ದಳು. ಇದನ್ನು 'ಗಾಂಧಿನಿಧಿ'ಗೆ ಕೊಡುವ ಮೂಲಕ ಮಾನವೀಯತೆಯನ್ನು ಮೆರೆಯುತ್ತಾಳೆ. ಈ ಕಾರಣಕ್ಕೆ ಹೆಚ್ಚಿನ ಸ್ತ್ರೀ ಪಾತ್ರಗಳು ಕೇವಲ ಸ್ತ್ರೀ ಪಾತ್ರವಾಗಿ ಮಾತ್ರ ಉಳಿಯದೇ ಮಾನವೀಯ ಪಾತ್ರಗಳಾಗುವುದು ಮಹತ್ವದ್ದಾಗಿದೆ.. ಹೀಗೆ ವಿಸ್ತಾರವಾದ ನೆಲೆಯಲ್ಲಿ ಕ್ರಾಂತಿಯು ತನ್ನ ವಿಸ್ತಾರದ ನೆಲೆಯನ್ನು ಹರಡಿಕೊಂಡಿತು. ಕೊನೆಗೂ ಗಾಂಧಿ ತುಳುನಾಡಿಗೆ ಶ್ರಾವಣ ತಿಂಗಳಲ್ಲಿ ಬಂದರು. ಅಸಂಖ್ಯಾತ ಜನರು ಗಾಂಧಿಯನ್ನು ಬರಮಾಡಿಕೊಂಡರು. ಅನೇಕ ಜನರು ಪೋಲಿಸರಿಂದ ಸಣ್ಣ ಪುಟ್ಟ ಏಟುಗಳನ್ನು ತಿನ್ನಬೇಕಾಯಿತು.

“. . . ..ಒಟ್ಟಾರೆ ಆಳುಗಳಿಂದ ಅವರಿಬ್ಬರೊಳಗೆ ಗಾಂಧಿಯಾರು.. . . .” (‘ಗಾಂಧಿ ಬಂದ’ ಪು.ಸಂ. ೧೭೫) ಎಂಬ ಚರ್ಚೆಗಳು ಪ್ರಾರಂಭವಾಯಿತು. ಆಳುಗಳು ಹೊಸ ಪ್ರಪಂಚದೊಂದಿಗೆ ವ್ಯವಹರಿಸುವ, ಸೇರಿ ಸುಖಿಸುವ ಸಮೂಹದ ಅನುಭವ ಈ ಮೂಲಕ ದಕ್ಕಿತು. ಗಾಂಧಿ ಚಳುವಳಿಯಲ್ಲಿ ಒಂದಾದ ಅಸಹಕಾರ ಚಳಿವಳಿ ಕುರಿತು ಗಾಂಧಿಯಿಂದಲೇ ಭಾಷಣ ನಡೆಯಿತು. ಶ್ರೀಮಂತರು ಮತ್ತು ಬಡವರ ಮಧ್ಯದ ಅಂತರದಿಂದಾಗುವ ಅನಾಹುತಗಳು ಅಪಾರ. ಈ ನೆಲೆಯಲ್ಲಿ ಗಾಂಧಿ ಮಕ್ಕಳ ಶಿಕ್ಷಣದ ಕುರಿತು, ಖಾಸಗಿ ಶಾಲೆಗಳ ಕುರಿತ ಜನರಿಗೆ ಮಾಹಿತಿ ನೀಡಿದರು. ಸರಕಾರಿ ಶಾಲೆಗಳಿಗೆ ಇವರ ಪ್ರಾಧಾನ್ಯತೆ ನೀಡಬೇಕೆಂದರು. ಗಾಂಧಿ ಹೋರಾಟದ ಭಾಗವಾಗಿ ‘ಗಾಂಧಿಟೊಪ್ಪಿ’ಯ ಕುರಿತು ಗಾಂಧಿವಾದಿಗಳು ಪ್ರಚಾರ ಮತ್ತು ಮಾರಾಟ ಮಾಡುತ್ತಾರೆ. ಗಾಂಧಿ ಟೊಪ್ಪಿ ಖಾದಿ ಮಾರಾಟಗಳಿಗೆ ಒಂದು ಚಪ್ಪರ ಏರ್ಪಡಿಸಿ ಗಾಂಧಿ ವಾದಿಗಳು ದಿನ ಗೊತ್ತು ಪಡಿಸುತ್ತಾನೆ.

“. . . . ಗಾಂಧಿ ಟೊಪ್ಪಿ, ಖಾದಿ, ಪಂಚೆ, ಖಾದಿ ಜುಬ್ಬ, ಖಾದಿಸೀರೆ ಮಾರುತ್ತಿದ್ದುದು ಆ ವರ್ಷದ ನೇಮದ ಸಂತೆಯ ವಿಶೇಷವಾದ್ದರಿಂದ ಎಲ್ಲರೂ ಒಮ್ಮೆ ಕಣ್ಣು ಹಾಯಿಸಿ ಬರುವ ಎಂದು ಈ ಚಪ್ಪರದತ್ತ ಮುಖ ಹಾಕುತ್ತಿದ್ದರು . . . . ” (ಗಾಂಧಿ ಬಂದ ಪು.ಸಂ. ೨೬೨). ಹೀಗೆ ಚಿಂತನೆಗಳಲ್ಲಿ ಜನಸಾಮಾನ್ಯರ ಮನಸ್ಥಿತಿಗಳನ್ನು ಇಲ್ಲಿ ಗುರುತಿಸಬಹುದು. ಆಳು ಮಕ್ಕಳಿಗೆ ಸೇರಿದ ಜನರಿಗೆ ಇದು ಜಾತ್ರೆಯಂತೆ ವಿಶೇಷವಾಗಿ ಕಾಣಿಸಿತು. ಗುತ್ತಿನ ಶೆಟ್ಟರು ಎರಡು ಗಾಂಧಿ ಟೊಪ್ಪಿಯನ್ನು ಕೊಂಡರು.

“. . . . . ಗಾಂಧಿ ಟೊಪ್ಪಿಗಾಗಿ ಯಾವತ್ತಿನಿಂದಲೇ ದುಂಬಾಲುಬಿದ್ದ ಕೊರಗರ ಐತು, ಪೊತ್ತೆಲ, ಲಾಂತು, ಚನಿಯರಿಗೆ ಮುಂಡಾಲರ ದೋಗು, ಕುದುಪ, ಚಾಂಪ, ಮುಗೇರರ ಕೇಪು, ಕೂಕ್ರ, ಬಸ್ಸ, ಇವರೆಲ್ಲರೂ ಒಂದಿಷ್ಟು ಟೊಪ್ಪಿ ಖರೀದಿಸಿ ತನ್ನಾಳುಗಳ ಕೈಯಲ್ಲಿ ಕಳುಹಿಸಿಕೊಟ್ಟರು. . . . ” (‘ಗಾಂಧಿ ಬಂದ’ ಪು.ಸಂ.೨೬೩). ಗಾಂಧಿ ಬರುವುದರ ಮೂಲಕ ಬ್ರಾಹ್ಮಣರ, ಬಂಟರ ಸಂಬಂಧಗಳಲ್ಲಿ ವ್ಯತ್ಯಾಸವಾಗಿದೆ. ಶ್ರಮಿಕ ವರ್ಗ ಬಂಟರ ಕಡೆಯಿದೆ. ಎಲ್ಲರ ಕನಿಷ್ಠ ಆಸೆಗಳನ್ನು ಈಡೇರಿಸುವ ಪ್ರಯತ್ನ ಮಾಡುತ್ತಿದ್ದಾರೆ. ಗಾಂಧಿ ಬರುವ ಹಿನ್ನಲೆಯಲ್ಲಿಯೇ ಕಳೆದುಹೋದ ಅನೇಕ ಆಭರಣಗಳು ‘ಗಾಂಧಿ ನಿಧಿ’ಗೆ ಸೇರುತ್ತದೆ. ಪುಟ್ಟ ಮಕ್ಕಳಿಗೆ ಅರಿವು ದೊರೆತಾಗ ಹೆಬ್ಬಾರರು ನೀಡಿದ ಚಿನ್ನ ಬೇಡವಾಗುತ್ತದೆ. ಅದನ್ನು ಗಾಂಧಿ ನಿಧಿಗೆ ನೀಡುತ್ತಾರೆ. ಹೀಗೆ ಗಾಂಧಿಯ ಮೌಲ್ಯವು ರಾಷ್ಟ್ರೀಯ ನೆಲೆಯಲ್ಲಿ ‘ಮಾನವತಾವಾದ’ವನ್ನು ನಿರ್ಮಿಸಿತು. ಮನುಷ್ಯ–ಮನುಷ್ಯರ ಮಧ್ಯೆ ನಂಬಿಕೆ, ಪ್ರೀತಿ ವಿಶ್ವಾಸಗಳು ಕುದುರಿದವು. ಶ್ರಮ ಸಂಸ್ಕೃತಿಯ ಮೂಲವು ಅವರ ಮುಂದಿರುವ ಸ್ವಂತದ ಬದುಕಲ್ಲಿ ತೊಡಗಿಸಿಕೊಳ್ಳುವ ಹಾಗೆ ಆಯಿತು. ಮಾನವತಾವಾದ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ರೂಪು ಪಡೆಯಲು ಗಾಂಧಿ ಕಾರಣರಾದರು ಎಂಬುದನ್ನು ಕಾದಂಬರಿ ಗುರುತಿಸುತ್ತದೆ.

ಗಾಂಧಿ ತುಳುನಾಡಿಗೆ ಎರಡನೆ ಬಾರಿ ಬರುವಾಗ ಸ್ವಾತಂತ್ರ್ಯದ ಚಳುವಳಿಯ ಬಿಸಿ ಏರತೊಡಗಿತು. ". . . . . ಕಾರ್ನಾಡರ ಬಂಧನದ ಬೆನ್ನಿಗೇ ಪರದೇಶೀ ವಸ್ತ್ರ ಬಹಿಷ್ಕಾರ ಚಳುವಳಿ ಹುಟ್ಟಿಕೊಂಡಿತು. ಮಾರಪ್ಪ, ತಿಂಗಳರಾಯ, ಅದ್ರಾಮರೆಲ್ಲ ರಾತ್ರಿ ಹಗಲೆನ್ನದೇ ಆ ಚಳುವಳಿಯಲ್ಲಿ ಪಾಲ್ಗೊಂಡರು. . . . .. " ('ಗಾಂಧಿ ಬಂದ' ಪು.ಸಂ. ೩೨೪) ಪರದೇಶೀ ವಸ್ತ್ರಗಳನ್ನು ಬೆಂಕಿಯಲ್ಲಿ ಉರಿಸಲಾಯಿತು. ವಿದೇಶಿನೀತಿ ಬದುಕು ಕರಾವಳಿಯ ಬದುಕು, ಪ್ರಾದೇಶಿಕತೆ, ಸಂಸ್ಕೃತಿಯನ್ನು ಉಳಿಸಲಾರದು ಎಂಬ ಅರಿವು ಜನರಿಗೆ ದೊರೆಯಿತು. ಈ ಹೋರಾಟದ ಘರ್ಷಣೆಯಲ್ಲಿಯೇ ಗಾಂಧಿ ಹೋರಾಟಗಾರ ಅದ್ರಾಮನು ಗಾಯಗೊಂಡು ನೆಲದಲ್ಲಿ ಬಿದ್ದಿದ್ದಾನೆ. ಚಿಂತಾಜನಕ ಸ್ಥಿತಿಯಲ್ಲಿ ಸತ್ತು ಹೋಗುತ್ತಾನೆ. ಅದ್ರಾಮನ ಶವ ಸಂಸ್ಕಾರವನ್ನು ಬಂಟರ ಶಾಸ್ತ್ರ ಪ್ರಕಾರ ಮಾಡಿ ಮುಗಿಸಲಾಯಿತು. ಇತ್ತ ಇದೇ ಸಂದರ್ಭದಲ್ಲಿ ಅದ್ರಾಮನ ಹೆಂಡತಿ ದ್ರೌಪದಿ ಗಂಡು ಮಗುವಿಗೆ ಜನ್ಮ ನೀಡಿದ್ದಾಳೆ. ತನ್ನ ಏಕಾಂಗಿತನವನ್ನು ಕಳೆಯಲು ಕಾರ್ನಾಡರು ನೀಡಿದ ತಕಲಿಯಿಂದ ನೂಲುತ್ತಿದ್ದಾಳೆ.

ಬ್ರಾಹ್ಮಣರು, ಬಂಟರು, ಮುಸ್ಲಿಂರಿಗೆ ಕ್ರಾಂತಿಯ ಬಿಸಿ ತಟ್ಟಿದೆ. ಬ್ರಾಹ್ಮಣರು ಮೇಲ್ವರ್ಗದ ನೆಲೆಯಿಂದ ಸುಖವಾಗಿದ್ದಾರೆ. ಬಂಟರು ಸಮಾಜದ ಪರವಾಗಿ ಹೋರಾಡುತ್ತಿದ್ದಾರೆ. ಅಸ್ಪೃಶ್ಯರನ್ನು 'ಮನುಷ್ಯ'ರಾಗಿ ಬದಲಾಯಿಸಿದ್ದಾರೆ. ಗಾಂಧಿ ಮೂರನೇ ಬಾರಿ ಬರುವಾಗ ದ್ರೌಪದಿ ವಿಧವೆಯಾಗಿದ್ದಾಳೆ. ಹೋರಾಟಗಾರ ಅದ್ರಾಮ ಸತ್ತುಹೋಗಿದ್ದಾನೆ. ಈ ಎಲ್ಲಾ ಹಿನ್ನಲೆಯಲ್ಲಿ ಗಾಂಧಿ ದ್ರೌಪದಿಯನ್ನು ಗಮನಿಸಿದ್ದಾರೆ. ಹೋರಾಟಗಾರ ಮಾರಪ್ಪನ ಸತಿ ದಾರು ಹಾಗೂ ದ್ರೌಪದಿ ಗಾಂಧಿ ನಿಧಿಗೆ ನೀಡಿದ ನಿಧಿಯನ್ನು ಗಾಂಧೀಜಿ ಸ್ವೀಕರಿಸಿದ್ದಾರೆ. ಮರಳಿ ಮರಳಿ ದ್ರೌಪದಿ ವಿಧವೆಯಾದರೂ ಗಾಂಧಿಯ ಕೈಯಿಂದ ಈಕೆಗೆ ಮುತ್ತೈದೆ ಭಾಗ್ಯ ದೊರೆಯುತ್ತದೆ. ಆ ಮುತ್ತೈದೆ ಭಾಗ್ಯವು ಯಾವ ಧರ್ಮದ ಪರವಾಗಿಲ್ಲ. ಮನುಷ್ಯತ್ವದ ಪರವಾಗಿದೆ. ಬ್ರಿಟೀಷರು ತುಳುನಾಡನ್ನು ಬಿಟ್ಟು ತೊಲಗಲು ಸಾಧ್ಯವಾಗಿದೆ. ತುಳುನಾಡ ಜೀವನದಲ್ಲಿ ನಿಜವಾದ ಸಂಸ್ಕೃತಿಯ ಶೋಧನೆ ಬದುಕುವ ನೆಲೆಯಲ್ಲಿ ಆಗಿದೆ. ಶೂದ್ರರು ಸಮಾಜದ ಗೌರವ ಸ್ಥಾನಗಳನ್ನು, ಶಿಕ್ಷಣವನ್ನು ಸಾಧ್ಯವಾದ ನೆಲೆಯಲ್ಲಿ ಪಡೆಯಲು ಸಾಧ್ಯವಾಗಿದೆ. ಜಾತಿ ಧರ್ಮಗಳಲ್ಲಿ ಸಮೂಹದ ಆಸಕ್ತಿಗಳು ಪ್ರವೇಶ ಪಡೆದುಕೊಂಡಿವೆ. ತುಳುನಾಡ ಪ್ರಾದೇಶಿಕ ಸಂಸ್ಕೃತಿಯು ಚಳುವಳಿಯ ನೆಲೆಯಲ್ಲಿ ಹೀಗೆ ಪ್ರತಿಬಿಂಬಿತವಾಗಿದೆ.

<u>ಟಿಪ್ಪಣಿಗಳು:</u>

೧ ಪುರುಷೋತ್ತಮ ಬಿಳಿಮಲೆ ಕರಾವಳಿ ಜಾನಪದ ಪುಟ ೨೨

೨ ಅದೇ ಪುಟ ೨೪

೩ ಆಲಿಭೂತ– ಮುಸ್ಲಿಂ ವ್ಯಕ್ತಿಯೊಬ್ಬ ಅಕಾಲಿಕ ಮರಣದಿಂದ ಭೂತನಾದ ಎಂಬ ನಂಬಿಕೆಯಿಂದ ಹುಟ್ಟಿದ ಆರಾಧನೆ. ತುಳುನಾಡಿನ ಆಚರಣೆಗಳ ಮೇಲೆ ಮುಸ್ಲಿಂ ಪ್ರಾಭಾವಕ್ಕೆ ಸಾಕ್ಷಿ. ಹೀಗೆ ಧರ್ಮ ಸಾಮರಸ್ಯಕ್ಕೆ ಸಂಬಂಧಿಸಿದ ಹಲವು ಆರಾಧನೆಗಳಿವೆ.

# ಅಧ್ಯಾಯ – ಆರು

## ಉಪಸಂಹಾರ

**'ಗಾಂಧಿ ಬಂದ'** ಕಾದಂಬರಿಯ ಅಧ್ಯಯನದ ಹಿನ್ನಲೆಯಲ್ಲಿ ಈ ಕೆಳಗಿನ ವಿಚಾರಗಳನ್ನು ಶೋಧಿಸಲಾಗಿದೆ.

1. ಕಾದಂಬರಿಯಲ್ಲಿ ಗಾಂಧಿಯು ಒಬ್ಬ ವ್ಯಕ್ತಿಯಾಗದೆ ಸಂಸ್ಕೃತಿ ಸ್ಥಿತ್ಯಂತರದ ಮೌಲ್ಯವಾಗಿ ಚಿತ್ರಿತರಾಗಿದ್ದಾರೆ. ರಾಷ್ಟ್ರೀಯ ಸ್ವಾತಂತ್ರ್ಯ ಚಳವಳಿಯಲ್ಲಿ ಭಾರತೀಯ ಜನಸಮೂಹದ ಮೇಲೆ ಗಾಂಧಿ ಬೀರಿರುವ ಪ್ರಭಾವವನ್ನು ಒಂದು ಭೌಗೋಳಿಕ ವ್ಯಾಪ್ತಿಯಲ್ಲಿ ವಿವರಿಸುವ ಪ್ರಯತ್ನವನ್ನು ಲೇಖಕಿ ಮಾಡಿದ್ದಾರೆ. ದಕ್ಷಿಣ ಕನ್ನಡ ಬದುಕಿನಲ್ಲಿ ಆಗುವ ಸ್ಥಿತ್ಯಂತರ ಕೇವಲ ಈ ಭೌಗೋಳಿಕ ಪ್ರದೇಶದಲ್ಲಿ ನಡೆದ ಸ್ಥಿತ್ಯಂತರ ಮಾತ್ರವಲ್ಲ, ಇಡೀ ಭಾರತದಲ್ಲಿ ಈ ರೀತಿಯ ಸ್ಥಿತ್ಯಂತರವನ್ನು ಕಾಣಬಹುದು. ಈ ದೃಷ್ಟಿಯಿಂದ ಗಾಂಧಿಯ ಬರುವಿಕೆ ಗಾಂಧಿಯ ಆಗಮನ ಮಾತ್ರವಾಗದೆ ಹೊಸ ಮೌಲ್ಯಗಳ ಆಗಮನವಾಗಿದೆ. ಶೂದ್ರರು, ದಲಿತರು, ಸ್ತ್ರೀಯರ ಬದುಕಿನಲ್ಲಿ ಮಹತ್ವದ ಬದಲಾವಣೆಗೆ ಗಾಂಧಿ ತತ್ವಗಳು ಕಾರಣವಾಗಿದೆ. ಇದನ್ನು ಕಾದಂಬರಿ ಅರ್ಥಪೂರ್ಣವಾಗಿ ಚಿತ್ರಿಸುತ್ತದೆ. ಈ ದೃಷ್ಟಿಯಿಂದ ಕಾದಂಬರಿಗೆ ಐತಿಹಾಸಿಕ ಮಹತ್ವವಿದೆ. ಚರಿತ್ರೆಯನ್ನು ಸೃಜನಶೀಲ ಕೃತಿಯ ಮೂಲಕ ಅಭಿವ್ಯಕ್ತಿಗೊಳಿಸುವ ತಂತ್ರಕ್ಕೆ **'ಗಾಂಧಿ ಬಂದ'** ಕೃತಿಯು ಮಾದರಿಯಾಗಿದೆ.

2. ತುಳುನಾಡಿಗೆ ಆಧುನಿಕತೆ ಪ್ರವೇಶವಾದಾಗ ಆಗುವ ಸ್ಥಿತ್ಯಂತರವನ್ನು ಕಾದಂಬರಿಯು ಅರ್ಥಪೂರ್ಣವಾಗಿ ಅಭಿವ್ಯಕ್ತಿಗೊಳಿಸುತ್ತದೆ. ಗಾಂಧಿಯ ಆಗಮನ ಕೇವಲ ವ್ಯಕ್ತಿಯೊಬ್ಬನ ಆಗಮನವಾಗಿರದೆ, ಹೊಸ ಮೌಲ್ಯಗಳ ಆಗಮನವೂ ಆಗುತ್ತದೆ. ಆಧುನಿಕತೆ ಮತ್ತು ಗಾಂಧಿ – ಎರಡನ್ನೂ ಒಂದೇ ಸ್ಥರದಲ್ಲಿ ಕಾದಂಬರಿಯು ಚಿತ್ರಿಸುತ್ತದೆ. ಗಾಂಧಿಯ ಆಗಮನವು ದಕ್ಷಿಣ ಕನ್ನಡ ಸಾಮಾಜಿಕ ಬದುಕಿನಲ್ಲಿ ಜಾತಿಯ ಸ್ವರೂಪದ ಬದಲಾವಣೆ ಉಂಟು ಮಾಡುತ್ತದೆ. ಸಾಮಾಜಿಕ ಸ್ವರೂಪದಲ್ಲಿ ಪರಿಣಾಮಗಳನ್ನು ಉಂಟು ಮಾಡುತ್ತದೆ. ವಿವಾಹ ಸ್ವರೂಪದಲ್ಲಿ ಬದಲಾವಣೆಯನ್ನು ಉಂಟು ಮಾಡುತ್ತದೆ. ಎಲ್ಲಕ್ಕಿಂತಲೂ ಮುಖ್ಯವಾಗಿ ಸಂಸ್ಕೃತಿಯ ಸ್ವರೂಪದಲ್ಲಿ ಬದಲಾವಣೆಯನ್ನು ಉಂಟುಮಾಡುತ್ತದೆ. ಈ ಬದಲಾವಣೆಗೆ ಕೇವಲ ಗಾಂಧಿ ಮಾತ್ರ ಕಾರಣರಾಗುವುದಿಲ್ಲ. ಆಧುನಿಕ ಚಿಂತನೆ ಮತ್ತು ಮೌಲ್ಯಗಳು ಕಾರಣವೆಂಬುದನ್ನು ಕಾದಂಬರಿ ಸಮರ್ಥಿಸುತ್ತದೆ.

3. ತುಳುನಾಡಿನ ಬದುಕಿನಲ್ಲಿ ಉಂಟಾಗುವ ಸಾಮಾಜಿಕ ಸ್ಥಿತ್ಯಂತರ ಹಾಗೂ ಈ ಸಾಮಾಜಿಕ ಸ್ಥಿತ್ಯಂತರವು ಹೇಗೆ ಸಾಮರಸ್ಯಕ್ಕೆ ಕಾರಣವಾಗುತ್ತದೆ ಎಂಬುದಕ್ಕೆ ಕಾದಂಬರಿಯ ಘಟನೆಗಳು ರೂಪಕವಾಗಿವೆ. ಮುಖ್ಯವಾಗಿ ಕಾದಂಬರಿಯಲ್ಲಿ ನಡೆಯುವ ದ್ರೌಪದಿ – ಅದ್ರಾಮರ

ಹಿಂದೂ-ಮುಸ್ಲಿಂ ವಿವಾಹವು ಸಾಮಾಜಿಕ ಸ್ಥಿತ್ಯಂತರಕ್ಕೆ ಮುಖ್ಯ ಕಾರಣವಾಗುತ್ತದೆ. ಪುರೋಹಿತ ವರ್ಗ ಬ್ರಾಹ್ಮಣರು ಮತ್ತು ಆಳುವ ವರ್ಗ ಬಂಟರ ನಡುವೆ ಈ ವಿವಾಹವು ಬಿರುಕನ್ನು ಉಂಟು ಮಾಡುತ್ತದೆ. ಬಂಟರು ಸಾಮಾಜಿಕ ಕಾರಣಗಳಿಗಾಗಿ ಈ ವಿವಾಹವನ್ನು ಬೆಂಬಲಿಸುತ್ತಾರೆ. ಇದರಿಂದ ಶೂದ್ರರೇ ಆಗಿರುವ ಬಂಟರನ್ನು ಇತರ ಶೂದ್ರವರ್ಗಗಳ ಸಮೀಪಕ್ಕೆ ಬರುವಂತೆ ಮಾಡುತ್ತದೆ. ದ್ರೌಪದಿ-ಅದ್ರಾಮರ ವಿವಾಹವನ್ನು ಶೂದ್ರ-ದಲಿತ ವರ್ಗಗಳು ಬೆಂಬಲಿಸುತ್ತವೆ. ಈ ರೀತಿ ಶ್ರೇಣೀಕೃತ ವ್ಯವಸ್ಥೆಯ ಸಂಬಂಧಗಳಲ್ಲಿ ಉಂಟಾಗುವ ಈ ಪರಿವರ್ತನೆಗೆ ಗಾಂಧಿಯ ಆಗಮನವಾಗುತ್ತದೆ. ಇದು ಶೂದ್ರ-ದಲಿತರನ್ನು ತಮ್ಮ ಸ್ಥಿತಿಯ ಬಗ್ಗೆ ಚಿಂತಿಸುವಂತೆ ಮಾಡುತ್ತದೆ. ಗಾಂಧೀಜಿಯವರ ಹಿಂದೂ-ಮುಸ್ಲಿಂ ಸಾಮರಸ್ಯದ ಸಿದ್ಧಾಂತವು ಶೂದ್ರ-ದಲಿತ ವರ್ಗದ ನಡುವೆ ಸಾಮರಸ್ಯಕ್ಕೆ ಕಾರಣವಾಗುತ್ತದೆ. ಹಿಂದೂ-ಮುಸ್ಲಿಂ ಎರಡೂ ವರ್ಗದ ಸಂಪ್ರದಾಯವಾದಿಗಳು ಈ ಧರ್ಮಸಂಕರ ವಿವಾಹವನ್ನು ವಿರೋಧಿಸಿದರೂ ಶೂದ್ರ-ದಲಿತರ ಒಗ್ಗಟ್ಟು ಮತ್ತು ಗಾಂಧಿವಾದಿಗಳ ಬೆಂಬಲದಿಂದ ಅದು ನಡೆದು ಹೋಗುತ್ತದೆ. ಇದು ತುಳುನಾಡಿನ ಸಾಮಾಜಿಕ ವ್ಯವಸ್ಥೆಯಲ್ಲಿ ಹೊಸ ಸಮೀಕರಣಕ್ಕೆ ಕಾರಣವಾಗುವುದಲ್ಲದೆ, ಸಾಮರಸ್ಯದ ವಾತಾವರಣ ನಿರ್ಮಾಣಕ್ಕೆ ಕಾರಣವಾಗುತ್ತದೆ. ಸ್ವಾತಂತ್ರ್ಯದ ಬಳಿಕ ದೇಶದ ಇತರ ಕಡೆ ಕೋಮು ಗಲಭೆಗಳು ನಡೆದರೂ ತುಳುನಾಡಿನಲ್ಲಿ ಈ ರೀತಿಯ ಘಟನೆಗಳು ನಡೆದಿಲ್ಲ. ಇದಕ್ಕೆ ಶೂದ್ರ-ದಲಿತ ಮತ್ತು ಮುಸ್ಲಿಂರ ಸಾಮರಸ್ಯವು ಮುಖ್ಯ ಕಾರಣವಾಗಿದೆ. ಈ ರೀತಿಯ ಒಂದು ವಾತಾವರಣ ಗಾಂಧಿ ತತ್ವದಿಂದಾಗಿ ನಿರ್ಮಾಣವಾಗಿರುವುದನ್ನು ಕಾದಂಬರಿಯು ಖಚಿತ ಪಡಿಸುತ್ತದೆ. ಸ್ವಾತಂತ್ರ್ಯ ಹೋರಾಟದ ಚಾರಿತ್ರಿಕ ಘಟನೆಗೆ ಕಾದಂಬರಿಯು ಸೃಜನಾತ್ಮಕ ವ್ಯಾಖ್ಯಾನವನ್ನು ನೀಡುತ್ತದೆ. ಇದು ಈ ಅಧ್ಯಯನದಿಂದ ವ್ಯಕ್ತವಾಗುತ್ತದೆ.

4. ಕಾದಂಬರಿಯ ವಿಶಿಷ್ಟತೆ ಇರುವುದು ತುಳುನಾಡಿನ ಸಂಸ್ಕೃತಿಯ ಅಭಿವ್ಯಕ್ತಿಯಲ್ಲಿ. ತುಳುನಾಡಿನ ಸಂಸ್ಕೃತಿಯ ಭಾಗವಾದ ಕಂಬಳ, ಭೂತಾರಾಧನೆ, ಕುಣಿತಗಳು, ಆಚರಣೆ-ನಂಬಿಕೆಗಳು ಅಪೂರ್ವವಾದ ರೀತಿಯಲ್ಲಿ ಚಿತ್ರಣಗೊಂಡಿದೆ. ಇಲ್ಲಿನ ಮೌಖಿಕ ಸಾಹಿತ್ಯ, ಭೌತಿಕ ಸಂಸ್ಕೃತಿ, ಪ್ರದರ್ಶನ ಕಲೆಗಳು, ಆಚರಣೆ ಮತ್ತು ನಂಬಿಕೆಗಳು ಅಂದರೆ ಇಡೀ ಜಾನಪದ ಜಗತ್ತು ಕೃತಿಯಲ್ಲಿ ಅನಾವರಣಗೊಂಡಿದೆ. ಒಂದು ರೀತಿಯಲ್ಲಿ ಕಾದಂಬರಿಯು ತುಳು ಜಾನಪದ ಬದುಕಿನ ಪುಟ್ಟ ಕೈಪಿಡಿಯಂತಿದೆ. ಈ ಸಂಸ್ಕೃತಿಯು ವ್ಯಕ್ತವಾಗುವ ರೀತಿಯು ಅನನ್ಯವಾದುದು. ಗಾಂಧಿಯ ಬರುವಿಕೆಯ ಹಿನ್ನಲೆಯಲ್ಲಿ ಉಂಟಾಗುವ ಸ್ಥಿತ್ಯಂತರವನ್ನು ವಿವರಿಸುತ್ತಾ ಈ ಸಾಂಸ್ಕೃತಿಕ ಅನಾವರಣ ನಡೆಯುತ್ತದೆ. ತುಳುನಾಡಿನ ಸಂಸ್ಕೃತಿಯ ದಾಖಲೀಕರಣ ಕಾದಂಬರಿಯ ರೂಪದಲ್ಲಿ ನಡೆದಿದೆ.

ತುಳುನಾಡಿನ ಸಂಸ್ಕೃತಿಯ ಅಭಿವ್ಯಕ್ತಿಯೊಂದಿಗೆ ಸ್ವಾತಂತ್ರ್ಯ ಹೋರಾಟದ ದಾಖಲೀಕರಣವೂ ಕಾದಂಬರಿಯಲ್ಲಿ ನಡೆದಿದೆ. ಈ ದೃಷ್ಟಿಯಿಂದಲೂ ಕಾದಂಬರಿ ಅಧ್ಯಯನ ಯೋಗ್ಯವಾಗಿದೆ.

ಹಲವು ಮಿತಿಗಳಲ್ಲಿ ನಡೆದ ಈ ಅಧ್ಯಯನವು ಒಂದು ಮಿತಿಯಲ್ಲಿ ಕಾದಂಬರಿಯ ವಿಶ್ಲೇಷಣೆ ಮಾಡಿದೆ. ನಾಗವೇಣಿ ಎಚ್‌ರವರ ಕೃತಿ ವೈಶಿಷ್ಟ್ಯಗಳ ಕೆಲವು ಮುಖಗಳನ್ನು ಮಾತ್ರ ಈ ಅಧ್ಯಯನವು ಪರಿಚಯಿಸಿದೆ. ಅವರ ಕೃತಿಗಳ ಸಮಗ್ರ ಅಧ್ಯಯನವು ತುಳುನಾಡಿನ ಸಂಸ್ಕೃತಿ–ಪರಿಸರ –ಚಾರಿತ್ರಿಕ ಅಂಶಗಳ ದೃಷ್ಟಿಯಿಂದ ಬಹು ಮುಖ್ಯವಾದುದು ಎಂಬುದು ಈ ಅಧ್ಯಯನದಿಂದ ವ್ಯಕ್ತವಾಗುತ್ತದೆ.

# ಪರಾಮರ್ಶನ ಗ್ರಂಥಗಳು

## ಇದುವರೆಗೆ ಪರಾಮರ್ಶಿಸಿದ ಗ್ರಂಥಗಳು


೧ ಅಮೃತ ಸೋಮೇಶ್ವರ., ಕೊರಗರು; 1982: ಎಬಿಲಿಟಿ ಪ್ರಕಾಶನ, ಬೆಂಗಳೂರು.

೨ ಅರವಿಂದ ಮಾಲಗತ್ತಿ., ಕೊರಗಜನಾಂಗ–ವಿಶ್ಲೇಷಣಾತ್ಮಕ ಅಧ್ಯಯನ;1990: ದ.ಕ. ಜಿಲ್ಲಾಪರಿಷತ್ತು, ಮಂಗಳೂರು.

೩ ಅರವಿಂದ ಮಾಲಗತ್ತಿ., ದಲಿತ ಚಳುವಳಿ, ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿ;1999: ಚೇತನ ಬುಕ್‌ಹೌಸ್, ಮೈಸೂರು.

೪ ಅರವಿಂದ ಮಾಲಗತ್ತಿ., ಸಾಂಸ್ಕೃತಿಕ ಚಳುವಳಿಗಳು ದಲಿತರು ಮತ್ತು ದಲಿತ ಸಾಹಿತ್ಯ ಚಳುವಳಿ; 1999: ಚೇತನ ಬುಕ್‌ಹೌಸ್, ಬೆಂಗಳೂರು.

೫ ಅನಂತಕೃಷ್ಣ ಹೆಬ್ಬಾರ್. ಎಂ., ರಾಮಚಂದ್ರ ಉಡುಪ. ಎನ್. (ಕನ್ನಡ ಅನುವಾದ) (ಇಂಗ್ಲೀಷ್ ಮೂಲ: ಶ್ರೀಪಾದ ಅಮೃತದಾರಿ) ಭಾರತ ಸಂಘ ಜೀವನದಿಂದ ಗುಲಾಮಗಿರಿಗೆ; 1983: ಅಭಿವ್ಯಕ್ತ ಪ್ರಕಾಶನ, ಫಾತಿಮ ಗಾರ್ಡನ್ಸ್, ವೆಲೆನ್ಸಿಯಾ, ಮಂಗಳೂರು – 575002.

೬ ಅನಂತ ಮೂರ್ತಿ.ಯು.ಆರ್., ಯುಗ ಪಲ್ಲಟ; 2004: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೭. ಕಿಶೋರಿ ನಾಯಕ್ ಕೆ.,ಮಹಿಳಾ ಅಧ್ಯಯನ ಸಾಧ್ಯತೆಗಳು ಮತ್ತು ಸವಾಲುಗಳು.,2007:ಮಹಿಳಾ ಅಧ್ಯಯನ ಕೇಂದ್ರ ಮಂಗಳೂರು ವಿಶ್ವವಿದ್ಯಾನಿಲಯ.

೮. ಕಿಶೋರಿ ನಾಯಕ್ ಕೆ.,ಸ್ತ್ರೀವಾದ ನೆಲೆಗಳು ಮತ್ತು ನಿಲುವುಗಳು.,1999:ಪ್ರಸಾರಾಂಗ ಮಂಗಳೂರು ಯುನಿವರ್ಸಿಟಿ ಮಂಗಳ ಗಂಗೋತ್ರಿ

೯ ಕಾಮತ್.ಕೆ. ಎಸ್.,ಒಡೆಯರಲ್ಲ, ಸೇವಕರು., 1985:ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಎಂ. ಜಿ. ಎಂ. ಕಾಲೇಜು, ಉಡುಪಿ

೧೦. ಗಾಯತ್ರಿ ನಾವಡ., ಮಹಿಳಾ ಸಂಕಥನ; 2003: ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು.

೧೧ ಗಾಯತ್ರಿ ನಾವಡ., ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀ ವಾದಿ ನೆಲೆಗಳು; 2006: ಸಿರಿ ಪ್ರಕಾಶನ ಹೊಸಪೇಟೆ.

೧೨ ಚ.ನ. ಶಂಕರರಾವ್., ಭಾರತೀಯ ಸಮಾಜ; 1991: ಜೈ ಭಾರತ್ ಪ್ರಕಾಶನ ಬಿಜೈ, ಆನೆಗುಂಡಿ, ಮಂಗಳೂರು.

೧೩ ಚಿನ್ನಪ್ಪ ಗೌಡ., ಪ್ರಧಾನ ಸಂಪಾದಕರು,ಮೇಲ್ನುಡಿ ಪ್ರಸಾರಾಂಗ.,2007:ಮಂಗಳೂರು ವಿಶ್ವವಿದ್ಯಾಲಯ ಮಂಗಳ ಗಂಗೋತ್ರಿ

೧೪ ಜೋಶಿ. ಡಿ.ಬಿ., ಆಧುನಿಕ ಭಾರತದ ಇತಿಹಾಸ; 1991: ಸ್ಟೇಶನ್ ರೋಡ್, ಮಹೇಂದ್ರಕರ ಸರ್ಕಲ್ ಹತ್ತಿರ, ಗದಗ-582101.

೧೫ ತೇಜಸ್ವಿನಿ ನಿರಂಜನ ಮತ್ತು ಸೀಮಂತಿನಿ ನಿರಂಜನ.,ಸ್ತ್ರೀವಾದಿ ಸಾಹಿತ್ಯ ವಿಮರ್ಶೆ.,1994:ನೇತ್ರಾ ಪ್ರಿಂಟರ್ಸ್, ಚಾಮರಾಜ ಪೇಟೆ ಬೆಂಗಳೂರು.

೧೬ ಧರಣಿದೇವಿ ಮಾಲಗತ್ತಿ. ಸ್ತ್ರೀವಾದ ಮತ್ತು ಭಾರತಾಂಬೆ; 1998: ಚೇತನ ಬುಕ್ ಹೌಸ್, ಮೈಸೂರು.

೧೭ ದಾಸೇಗೌಡ. ಬಿ.ವಿ., ನಮ್ಮ ಜನಪದ ನಂಬಿಕೆಗಳು; 1973: ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೮ ದಂಡಪ್ಪ ಎಚ್., ಬಡವರನಗುವಿನ ಶಕ್ತಿ;2001:ಶ್ಯಾಮ್ ಸಿಂಗ್ ಕಾಂಪ್ಲೆಕ್ಸ್ ಬೆಂಗಳೂರು

೧೯ ದುಗ್ಗಪ್ಪ ಯು ಮಲ್ಪೆ.,ಚಿಕ್ಕಮೇಳ ಪ್ರಸಂಗಗಳು ಅರ್ಥ ಸಹಿತ.,2006:ಕನ್ನಡ ಬಳಗ, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಅವೆನ್ಯೂ ರೋಡ್ , ಬೆಂಗಳೂರು.

೨೦ ನಾಗವೇಣಿ ಎಚ್.,ವಸುಂಧರೆಯ ಗ್ಯಾನ.,2006:ಲೋಹಿಯಾ ಪ್ರಕಾಶನ ಬಳ್ಳಾರಿ.

೨೧ ನಾಗವೇಣಿ ಎಚ್., ಮೀಯುವ ಆಟ.,2005:ಎಚ್. ನಾಗವೇಣಿ:; ಲೋಹಿಯಾ ಪ್ರಕಾಶನ ಬಳ್ಳಾರಿ.

೨೨ ನಾಗವೇಣಿ ಎಚ್., ನಾಕನೆ ನೀರು.,1997: ಕ್ರೈಸ್ಟ್ ಕಾಲೇಜು, ಬೆಂಗಳೂರು

೨೩ ನಾರಾಯಣ. ಕೆ.ವಿ.. ಸಾಹಿತ್ಯ ಹೆಣ್ಣು ಹೆಣ್ಣುತನ; 1988: ಮಹಿಳೆಯ ಮುನ್ನಡೆ, ಬೆಂಗಳೂರು.

೨೪ ನಾರಾಯಣ. ಎಂ., ಸಾಮಾಜಿಕ ವಿಘಟನೆ; 1982: ಆರ್.ಎಂ. ಪ್ರಕಾಶನ, ಜಯನಗರ, ಮೈಸೂರು–570014.

೨೫ ನಾವಡ. ಎ.ವಿ. (ಸಂ), ಗಿರಿಕೆರೆ., ರಾಮಕ್ಕ ಮುಗ್ಗೇರ್ತಿ ಕಟ್ಟಿದ ಸಿರಿಪಾಡ್ದನ; 1999: ನಿರ್ದೇಶಕರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಕಮಲಾಪುರ – 583 221.

೨೬ ನಾವಡ. ಎ. ವಿ.(ಸಂ)., ಕರಾವಳಿ ಜಾನಪದ; 2007: ಸ್ವಾಗತ ಸಮಿತಿ, ಅಖಿಲಭಾರತ 74ನೇಯ ಕನ್ನಡ ಸಾಹಿತ್ಯ ಸಮ್ಮೇಳನ–2007, ಉಡುಪಿ.

೨೭ ನಿಕೇತನ., ಸ್ತ್ರೀದೃಷ್ಟಿ.,2005: ರಾಶಿ ಪ್ರಕಾಶನ ಉಡುಪಿ.

೨೮ ನಟರಾಜ್ ಹುಳಿಯಾರ್.,ಸಂಪಾದಕರು,ರಾಮ ಮನೋಹರ ಲೋಹಿಯಾ ಬಹರಗಳಲ್ಲಿ ಮಾರ್ಕ್ಸ್ ಗಾಂಧಿ ಸಮಾಜದ ಭಾಗ –1 ಸಂಪುಟ 6., 2003:ಕರ್ನಾಟಕ ಸರಕಾರ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು.

೨೯ ಪುರುಷೋತ್ತಮ ಬಿಳಿಮಲೆ., ಕರಾವಳಿ ಜಾನಪದ; 1990: ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು.

೩೦ ಪೂವಪ್ಪ ಕಣಿಯೂರು., ಪೂಕರ್ ಮತ್ತು ಇತರ ಜಾನಪದೀಯ ಲೇಖನಗಳು.,2004:ರಾಜ್ ಪ್ರಕಾಶನ ನಂ 83, ಕೆ. ಎಸ್. ಆರ್. ಟಿ. ಸಿ ಬಡಾವಣೆ ಹನುಮಂತ ನಗರ ಬನ್ನಿ ಮಂಟಪ ಮೈಸೂರು 570 015

೩೧ ಪ್ರೇಮಾ ಸಿರ್ಸೆ.,ಮಹಿಳೆ ಸಮಾಜ ಮತ್ತು ಸವಾಲುಗಳು.,2006:ಕನ್ನಡ ಸಾಹಿತ್ಯ ಪರಿಷತ್ತು ಪಂಪ ಮಹಾ ಕವಿರೋಡು, ಚಾಮರಾಜ ಪೇಟೆ, ಬೆಂಗಳೂರು.

೩೨ ಪೂಜಾರ ವ್ಹಿ. ಜಿ.,ಕನ್ನಡ ಸಾಹಿತ್ಯ ಕೋಮು ಸೌಹಾರ್ದತೆ; (ಮಂಟಪಮಾಲೆ – 136).,2006:ಕನ್ನಡ ವಿಶ್ವವಿದ್ಯಾಲಯ ಹಂಪಿ.

೩೩ ಬೊಳುವಾರು ಮಹಮದ್ ಕುಂ೨ ,,ಪಾಪು ಗಾಂಧಿ, ಗಾಂಧಿ ಪಾಪು ಆದ ಕತೆ.,2006:ಕರ್ನಾಟಕ ಸರ್ಕಾರ ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು – 560002

೩೪ ಬೋರಲಿಂಗಯ್ಯ.,ಎ. ಎಸ್. ಪ್ರಭಾಕರ., ಬುಡಕಟ್ಟು ಅಧ್ಯಯನ.,2005:ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾಲಯ, ಹಂಪಿ

೩೫ ಮುಕುಂದ ಪ್ರಭು. ಎಂ., (ಸಂ)., ಪೊಲಿ; 2000: ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು – 585 001.

೩೬ ಮುಳಿಯ ತಿಮ್ಮಪ್ಪಯ್ಯ., ಸಂಸ್ಕೃತಿ; 1981: ಕರ್ನಾಟಕ ಸಂಘ, ಪುತ್ತೂರು.

೩೭ ಮನು ಉದ್ಧೃತ., ಅಂಬೇಡ್ಕರ್ ಬಿ.ಆರ್ ಜಾತಿ ಸತಿ ಮತ್ತು ಮಹಿಳೆ; 2001: ಸಿದ್ಧಾರ್ಥ ಗ್ರಂಥಮಾಲೆ , ಮೈಸೂರು.

೩೮ ಮಂಗಳಾ ಟಿ. ಪ್ರಿಯದರ್ಶಿನಿ.,ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ.,2007:ಕನ್ನಡ ವಿಶ್ವ ವಿದ್ಯಾಲಯ ಹಂಪಿ.

೩೯ ಮಹಾ ದೇವಯ್ಯ.,ಸಾಮಾಜಿಕ ಉಪಭಾಷೆ.,2000:( ಮಂಟಪ ಮಾಲೆ –85)ಕನ್ನಡ ವಿಶ್ವ ವಿದ್ಯಾಲಯ ಹಂಪಿ,

೪೦ ರಾಮಚಂದ್ರಪ್ಪ ಬರಗೂರು.,ಶಬ್ದವಿಲ್ಲದ ಯುದ್ಧ.,2007:ಅಂಕಿತ ಪ್ರಕಾಶನ ಬೆಂಗಳೂರು

೪೧ ರಹಮತ್ ತರೀಕೆರೆ., ಪ್ರತಿ ಸಂಸ್ಕೃತಿ; 1993: ಕ್ರೈಸ್ಟ್ ಕಾಲೇಜು, ಬೆಂಗಳೂರು.

೪೨ ರಹಮತ್ ತರೀಕೆರೆ., ಸಾಂಸ್ಕೃತಿಕ ಅಧ್ಯಯನ; 2004: ಕರ್ನಾಟಕ ಸಾಹಿತ್ಯ ಎಕಾಡೆಮಿ, ಕನ್ನಡ ಭವನ, ಜೆ.ಸಿ.ರೋಡ್, ಬೆಂಗಳೂರು – 560002.

೪೩ ರಹಮತ್ ತರೀಕರೆ.,ಕನ್ನಡ ಸಂಶೋಧನೆ ತಾತ್ವಿಕವಿಚಾರ.,2007:ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ 2006 ಹಂಪಿ.

೪೩ ರಹಮತ್ ತರೀಕರೆ.,ಕನ್ನಡ ಸಂಶೋಧನೆ ತಾತ್ವಿಕವಿಚಾರ.,2007:ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ 2006 ಹಂಪಿ.

೪೪ ರಮೇಶ್. ಕೆ.ವಿ., ತುಳುನಾಡಿನ ಇತಿಹಾಸ; 1969: ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ.

೪೫ ರಾಘವೇಂದ್ರ ಪ್ರಭು. ಎಂ., ಇತಿಹಾಸ; 2004: ಜೈ ಭಾರತ್ ಪ್ರಕಾಶನ, ಮಂಗಳೂರು.

೪೬ ರಾಜೇಂದ್ರ. ಟಿ.ಕೆ.,ನಮ್ಮ ನೂತನ ನಂಬಿಕೆಗಳು; 1973: ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೪೭ ರೋಹಿಣಿ.,ಸ್ತ್ರೀ ಸಂವೇದನೆ.,1995:ಹೇಮಾಂಶು ಪ್ರಕಾಶನ ದೇರಬೈಲು ಮಂಗಳೂರು

೪೮ ವಿಜಯಾ ದಬ್ಬೆ., ಮಹಿಳೆ ಸಾಹಿತ್ಯ ಸಮಾಜ; 1989: ಮೈಸೂರು ರಚನಾ ಪ್ರಕಾಶನ.

೪೯ ವೆಂಕಟಲಕ್ಷ್ಮೀ. ಬಿ.ಎನ್., ಬದುಕು, ಬವಣೆ, ಭರವಸೆ; 1979: ಎನ್.ಟಿ. ಶ್ಯಾಂ ಪ್ರಕಾಶನ, ಸಾಯಿರಾಂ, 13ನೇ 'ಬಿ' ಮೆಯಿನ್, ಎಚ್.ಎ.ಎಲ್. ಎರಡನೇ ಹಂತ, ಬೆಂಗಳೂರು

೫೦ ಸಬಿಹಾ ಭೂಮಿಗೌಡ.,ನುಡಿಗವಳ(ಮಹಿಳೆಯರ ಸೃಜನೇತರ ಸಾಹಿತ್ಯದ ಅವಲೋಕನ).,2006:ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

೫೧ ಸಿದ್ಧಲಿಂಗಯ್ಯ.,ಜನ ಸಂಸ್ಕೃತಿ.,2007:ಕನ್ನಡ ವಿಶ್ವ ವಿದ್ಯಾಲಯ ಹಂಪಿ.

೫೨ ಸಾರಾ ಅಬೂಬಕ್ಕರ್.,ಸಾಹಿತ್ಯ ಸಂಸ್ಕೃತಿ ಮತ್ತು ಮಹಿಳೆ.,2007:ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾಲಯ ಹಂಪಿ.

೫೩ ಸುಶೀಲ ಪಿ. ಉಪಾಧ್ಯಾಯ., ಜನಪದ ಆರಾಧನೆ ಮತ್ತು ರಂಗ ಕಲೆ; 1989: ಪ್ರಾದೇಶಿ ಜಾನಪದ ರಂಗ ಕಲೆಗಳ ಅಧ್ಯಯನ ಕೇಂದ್ರ , ದಕ್ಷಿಣ ಕನ್ನಡ.

೫೪ ಸುಮಿತ್ರಾಬಾಯಿ. ಎ.ಎನ್., ಗಾಯತ್ರಿ. ಎನ್. (ಸಂ) ಸ್ತ್ರೀವಾದಿ ಪ್ರವೇಶಿಕೆ; 1995: ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು.

೫೫ ಶಿವೋತ್ತಮ ಕಲ್ಲೆ, ರಾಜೀವ ಮಲ್ಪೆ., ಜಾತಿ ಪದ್ಧತಿ ಮತ್ತು ಹಿಂದುಳಿಯುವಿಕೆ; 1984: ಬಿಲ್ಲವರ ಸಮ್ಮೇಳನ ಅಸೋಸಿಯೇಷನ್, ಬೆಂಗಳೂರು.

೫೬ ಶ್ರೀರಂಗ., ನಮಗೊಂದು ಸಂಸ್ಕೃತಿ ಇದೆಯೇ; 1994 ಸಾಹಿತ್ಯ ಸಂಸ್ಕೃತಿ ಸಮಾಜ ವಿಸೀ ಸಂಪದ, ಬೆಂಗಳೂರು.

೫೭ ಶಾಂತಾ ಇಮ್ರಾಪುರ.,ಮಹಿಳೆ ಸಾಹಿತ್ಯ ಮತ್ತು ಸಂಸ್ಕೃತಿ; 2001: ಚೇತನಾ ಪ್ರಕಾಶನ ಧಾರವಾಡ.

೫೮ ಹಿರೇಮಠ. ಎಸ್.ಎಸ್., ದಲಿತ ಸಂಸ್ಕೃತಿ; 2001: ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೯ ಹೆರಂಜೆ ಕೃಷ್ಣ ಭಟ್ಟ.,(ಸಂ): ಸಂಶೋಧನ ಪ್ರಜ್ಞೆ;1995:ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ ಮಹಾತ್ಮಾ ಗಾಂಧಿ ಮೆಮೋರಿಯಲ್ ಕಾಲೇಜು ಉಡುಪಿ.

# ಮಾಹಿತಿ ಸಂಗ್ರಹ

೧. ಯಶೋಧರ. ಕೆ., 'ಬ್ರಾಹ್ಮಣ ಸಂಪ್ರದಾಯ, ಆಚಾರ - ವಿಚಾರ' .,೨೬-೦೭-೦೮:ಶ್ರೀ ಲಕ್ಷ್ಮೀ ಫ್ಯಾಕ್ಟರಿ ರಸ್ತೆ,ಬಿರ್ತಿ, ಬ್ರಹ್ಮಾವರ ಅಂಚೆ,ಉಡುಪಿ.

೨. ಸಂಜೀವ ಬಳ್ಕೂರು., 'ಜಾತಿ ಪದ್ದತಿಯ ಇಂದಿನ ಸ್ಥಿತಿಗತಿ' .,೩೦-೦೮-೦೮: ಬಳ್ಕೂರು ಗ್ರಾಮ ಮತ್ತು ಅಂಚೆ, ಬಸ್ರೂರು, ಕುಂದಾಪುರ ತಾಲೂಕು.

೩. ವಾಮಯ್ಯ ಶೆಟ್ಟಿ., 'ಮೂಲ್ಕಿಯ ಪ್ರಾದೇಶಿಕತೆಯ ಕುರಿತ ಮಾಹಿತಿ'., ೨೧-೦೭-೦೮:ಮೈಲೋಟು, ಮೂಲ್ಕಿ,ಮಂಗಳೂರು, ದ.ಕ.

೪. ವಿಠಲ ನಲಿಕೆ ಪುಂಡತೋಟ., 'ಭೂತಕೋಲಗಳ ಕುರಿತ ಮಾಹಿತಿ.', ೨೧-೦೭-೦೮: ಮೈಲೋಟು, ಮೂಲ್ಕಿ,ಮಂಗಳೂರು, ದ.ಕ.

